ಓಂ

# ಶ್ರೀ ಗುರುಮಲ್ಲೇಶ ಮಹಾತ್ಮೆ

ಮತ್ತು

## ಶ್ರೀ ಗುರುಪರಂಪರೆ



ಶ್ರೀಮಠದ ಮಹಾದ್ವಾರ

ಪ್ರಕಾಶನ

ಶ್ರೀಮನ್ನಿರಂಜನ ಗುರುಮಲ್ಲೇಶ್ವರ
ಮಹಾಸಂಸ್ಥಾನ ಮಠ

ದೇವನೂರು.

# ಶ್ರೀ ಗುರುಮಲ್ಲೇಶ ಮಹಾತ್ಮೆ

ಮತ್ತು

## ಶ್ರೀ ಗುರು ಪರಂಪರೆ

ಗ್ರಂಥಕರ್ತರು:

ಲಿಂಗೈಕ್ಯ ಶ್ರೀ ಬಸವಣ್ಣಸ್ವಾಮಿಗಳು

ಸಾಹಿ...

ಪ್ರಕಾಶಕ...

ಶ್ರೀಮನ್ನಿರಂಜನ ಗುರು...

ಮಹಾಸಂಸ್ಥಾನ

ದೇವನೂರು.

19-3-19...

...ಸ್ಸಿನಿಂದ
...ತಮ್ಮ ಪವಿತ್ರ ಪರಂಪರೆಯನ್ನುಳಿಸಿ
...ತ್ತಿರುವುದು ಹರ್ಷದ ವಿಷಯವಾಗಿದೆ. ಸ್ಥಳ
...ಮಾತ್ಮೆಯನ್ನರಿಯಲು ಸಂಕ್ಷಿಪ್ತ ಹಾಗೂ ವಾಸ್ತವಿಕ ಚರಿತ್ರೆಯು
...ತ್ಯ ರೂಪದಲ್ಲಿಲ್ಲದೆ ಉಂಟಾಗಿದ್ದ ಕೊರತೆಯನ್ನು ನೀಗಿಸುವ ಸತ್ಸಂ
ಲಿಂಗೈ...ದ ಶ್ರೀ ಶ್ರೀ ಬಸವಣ್ಣಸ್ವಾಮಿಗಳವರು
...ಹಾತ್ಮೆ" ಎಂಬ ಈ ಗ್ರಂಥವನ್ನು ರಚಿಸಿ
ದೇವನೂ... ಸಮಕಾಲೀನ ಸಾಹಿತ್ಯವನ್ನು ಪರಿಶೀಲಿಸಿ
...ಪಟ್ಟ ವಿಚಾರಗಳನ್ನು ಒರೆಗಲ್ಲಿಗೆ ಹಚ್ಚಿ
...ತಂದಿರುವ ಶ್ರೀಗಳವರ ಕಾರ್ಯವು
... ಭಕ್ತ ವೃಂದದಲ್ಲಿ ಸ್ಥಳ ಮಹಾ
...ಪಾತ್ರರಿಸುವುದರಲ್ಲಿ ಸಂದೇಹವಿಲ್ಲ.
... ನಿರೂಪಿಸಿರುವ ಈ ಮಹಾ
...ಚಿತವಾಗಿದ್ದು ತುಂಬಾ ಪ್ರಯೋ

...ಮಲ್ಲೇಶಸ್ವಾಮಿಗಳ ವಜ್ರ
...ಸುಸಂದರ್ಭದಲ್ಲಿ ಶ್ರೀ ಕ್ಷೇತ್ರಾ

# ಮುನ್ನುಡಿ

ಶರಣರುದಿಸಿ ನೆಲಿಸಿ ಬೆಳಗಿಸಿದ ಸ್ಥಳಗಳು ಪುಣ್ಯಕ್ಷೇತ್ರಗಳೆನಿಸಿ ಧರ್ಮನಿಲಯಗಳಾಗಿವೆ. ಗುರುಸಾರ್ವಭೌಮರೆನಿಸಿದ್ದ ಶ್ರೀ ಗುರುಮಲ್ಲೇಶ ಸ್ವಾಮಿಗಳವರ ಆತ್ಮ ತೇಜಸ್ಸಿನ ಪ್ರಭೆಯ ಪರಿಣಾಮವಾಗಿ "ದೇವನೂರು ಸುಕ್ಷೇತ್ರ" ಸ್ಥಾಪನೆಗೊಂಡು ಜನತೆಗೆ ನಾನಾ ರೀತಿಗಳಲ್ಲಿ ಸೇವೆ ಸಲ್ಲಿಸುತ್ತಾ ಧರ್ಮಜಾಗೃತಿಯನ್ನುಂಟುಮಾಡುತ್ತಿರುವುದು ಸರ್ವವಿದಿತವಾಗಿದೆ. ಮಹಾಸ್ವಾಮಿಗಳವರ ಅಪೂರ್ವ ಆಧ್ಯಾತ್ಮಿಕ ತೇಜಸ್ಸಿನಿಂದ ಪ್ರಭಾವಿತರಾದ ಅನೇಕ ಮಂದಿ ತಮ್ಮ ಪವಿತ್ರ ಪರಂಪರೆಯನ್ನುಳಿಸಿ ಬೆಳೆಸಿಕೊಂಡು ಬರುತ್ತಿರುವುದು ಹರ್ಷದ ವಿಷಯವಾಗಿದೆ. ಸ್ಥಳ ಮಹಾತ್ಮೆಯನ್ನರಿಯಲು ಸಂಕ್ಷಿಪ್ತ ಹಾಗೂ ವಾಸ್ತವಿಕ ಚರಿತ್ರೆಯು ಸಾಹಿತ್ಯ ರೂಪದಲ್ಲಿಲ್ಲದೆ ಉಂಟಾಗಿದ್ದ ಕೊರತೆಯನ್ನು ನೀಗಿಸುವ ಸತ್ಸಂಕಲ್ಪದಿಂದ ಲಿಂಗೈಕ್ಯರಾದ ಶ್ರೀ ಶ್ರೀ ಬಸವಣ್ಣ ಸ್ವಾಮಿಗಳವರು "ಶ್ರೀ ಗುರುಮಲ್ಲೇಶ ಮಹಾತ್ಮೆ" ಎಂಬ ಈ ಗ್ರಂಥವನ್ನು ರಚಿಸಿ ಮಹದುಪಕಾರ ಮಾಡಿದ್ದಾರೆ. ಸಮಕಾಲೀನ ಸಾಹಿತ್ಯವನ್ನು ಪರಿಶೀಲಿಸಿ ಸರ್ವವಿಧಗಳಲ್ಲಿಯೂ ಸಂಗ್ರಹಿಸಲ್ಪಟ್ಟ ವಿಚಾರಗಳನ್ನು ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿ ಸತ್ಯಾಂಶವನ್ನು ಬೆಳಕಿಗೆ ತಂದಿರುವ ಶ್ರೀಗಳವರ ಕಾರ್ಯವು ಪ್ರಶಂಸಾರ್ಹವಾದುದು. ಈ ಗ್ರಂಥವು ಭಕ್ತ ವೃಂದದಲ್ಲಿ ಸ್ಥಳ ಮಹಾತ್ಮೆಯ ನೈಜ ಮತ್ತು ಪವಿತ್ರ ಚಿತ್ರವನ್ನು ಬಿತ್ತರಿಸುವುದರಲ್ಲಿ ಸಂದೇಹವಿಲ್ಲ. ತಮ್ಮದೇ ಆದ ಒಂದು ವಿಶಿಷ್ಟ ಶೈಲಿಯಲ್ಲಿ ನಿರೂಪಿಸಿರುವ ಈ ಮಹಾತ್ಮೆಯು ಸರ್ವಜನಾಕರ್ಷಣೀಯವಾಗಿ ರಚಿತವಾಗಿದ್ದು ತುಂಬಾ ಪ್ರಯೋಜನಕಾರಿಯಾಗಿದೆ.

ನಿರಂಜನ ಪ್ರಣವ ಶ್ರೀ ಗುರುಮಲ್ಲೇಶ ಸ್ವಾಮಿಗಳ ವಜ್ರಮಹೋತ್ಸವವನ್ನಾಚರಿಸುತ್ತಿರುವ ಈ ಸುಸಂದರ್ಭದಲ್ಲಿ ಶ್ರೀ ಕ್ಷೇತ್ರಾ

ಧ್ಯಕ್ಷರಾದ ಶ್ರೀ ಶ್ರೀ ಮಹಾಂತಸ್ವಾಮಿಗಳವರ ನಿರ್ದೇಶನದ ಮೇರೆಗೆ ವಜ್ರೋತ್ಸವ ಸಮಿತಿಯವರು ಈ ಗ್ರಂಥವನ್ನು ಅಚ್ಚು ಹಾಕಿಸಿ ಪ್ರಕಟಿಸುತ್ತಿರುವುದು ಸಂತೋಷಜನಕ ಸಂಗತಿಯಾಗಿದೆ. ಗ್ರಂಥವನ್ನು ಜನತೆಯು ಭಕ್ತ್ಯಾದರಗಳಿಂದ ಸ್ವೀಕರಿಸಿ ಕೃತಾರ್ಥರಾಗಬೇಕಾಗಿದೆ. ದಯಾಮಯನಾದ ಪರಶಿವನ ಕೃಪೆಯಿಂದ ಈ ಗ್ರಂಥವು ಸರ್ವಾಂಗ ಸುಂದರವಾಗಿ ಮುದ್ರಿತಗೊಂಡು ಹೊರಬಂದು ಸದ್ಗ್ರಂಥವಾಗಿ ಚಿರಕಾಲ ಬಾಳಿ ಬೆಳಗಲೆಂದು ಹಾರೈಸಲು ಅತೀವ ಹರ್ಷಿಸುತ್ತೇವೆ.

ಇತಿ,

ಶ್ರೀ ಶಿವಕುಮಾರಸ್ವಾಮಿಗಳು

೧೯-೩-೧೯೬೩ ಶ್ರೀ ಸಿದ್ಧಗಂಗಾಕ್ಷೇತ್ರ



# ಪ್ರಕಾಶಕರ ಅರಿಕೆ

ನದೀಮೂಲ, ಋಷಿಮೂಲಗಳು ಅನೂಹ್ಯ, ಸಂಶೋಧನಾತೀತ ಎಂಬ ಸತ್ಯವಾಕ್ಯ ಜನಜನಿತವಾಗಿ ಪ್ರತೀತಿಯೇ ಆಗಿ ಪರಿಣಮಿಸಿರುವುದು ಸರ್ವರಿಗೂ ಸುವೇದ್ಯವೇ ಆಗಿದೆ. ಬಾಹ್ಯ ಚಕ್ಷುಗಳಿಗೆ ಗೋಚರವಾಗುತ್ತಿರುವ ಈ ಚರಾಚರ ಸೃಷ್ಟಿ—ಇಂತಿದು ಎಂದು, ಇದಮಿತ್ಥಂ ಎಂದು ಖಚಿತವಾಕ್ಯಗಳಿಗೆ, ಸ್ಪಷ್ಟನೆಗೆ ದೊರಕದೆ-ಗಹನವೂ, ಗೂಢಾತಿಗೂಢತರವೂ ಆಗುತ್ತ ಆಗುತ್ತ ಕೊನೆಗೆ ಹೇಗೆ ಅಭೇದ್ಯವಾಗಿ ಬಿಡುತ್ತದೋ ಕೇವಲ ಅಂತರಾತ್ಮ ಗಮ್ಯವಾಗುತ್ತದೋ, ಹಾಗೆಯೇ ಶರಣರ, ಮಹಾತ್ಮರ ನಿಜ ಜೀವನವೂ ಸಹ ಗೂಢಾತಿಗೂಢವಾಗಿ ಪರಿಣಮಿಸುವುದು ಸಹಜವೇ. ಸುಂದರ ಸುಮ ದೃಗ್ಗೋಚರ. ಆದರೆ ಅದರಲ್ಲಿ ಗರ್ಭಿತಗೊಂಡು ನಲ್ದೆಸೆಗೂ ಪ್ರಸರಿಸುವ ಪರಿಮಳ ದೃಗ್ಗೋಚರವೇ? ಹಾಲಿನ ಬಣ್ಣ ಕಣ್ಣಿಗೆ ಸ್ಪಷ್ಟ, ಆದರೆ ಅದರ ಸವಿಯ ಬಣ್ಣ ಸ್ಪಷ್ಟವೇ? ಈ ಸಮಸ್ತ ಸೃಷ್ಟಿ ಬಾಹ್ಯ ಚಾಕ್ಷುಷ ಗೋಚರ, ಆದರೆ ಇದರ ಕರ್ತೃ ದೃಗ್ಗೋಚರನೇ? ಅಂತೆಯೇ ಶರಣರ ಲೋಕೋದ್ಧಾರ ಲೀಲಾವಿಲಾಸವಷ್ಟೆ ದೃಗ್ಗೋಚರ, ಹೃದಯಂಗಮ, ಅನುಭವಗಮ್ಯ. ಆದರೆ ಅವರ ಹುಟ್ಟು, ಬಾಲ್ಯ ಯೌವನಾದಿಗಳು ಅಸ್ಪಷ್ಟ, ಒಂದೊಮ್ಮೆ ಸ್ಪಷ್ಟವಾದರೂ ಕಾರ್ಯಕಾರಣ ಸಂಬಂಧಕ್ಕೆ ಎಟುಕದುದು, ತರ್ಕಕ್ಕೆ ಒಳಗಾಗದುದು, ಲೌಕಿಕ ಕಟ್ಟು ಕಟ್ಟಳೆಗಳ ಚೌಕಟ್ಟಿಗೆ ನಿಲುಕದುದೂ, ಸಿಲುಕದುದೂ ಆಗಿರುತ್ತದಷ್ಟೆ. ಲೋಗರ ಮೋಹಪಾಶ ಬಂಧನಯುಕ್ತ ದೃಷ್ಟಿಗೆ ಮಹಾಮಹಿಮರು ಅಗ್ರಾಹ್ಯರಾಗಿ ಪರಿಣಮಿಸಿದ್ದಾರಷ್ಟೇ ಅಲ್ಲ, ಲೋಗರು ಅವರನ್ನು ತಮ್ಮ ಮಟ್ಟಕ್ಕೆಳೆದು ಕ್ರೂರ ತೃಪ್ತಿಪಟ್ಟಿರುವುದು ವಿಧಿಯ ವಿಕಟಾಟ್ಟಹಾಸಕ್ಕಿಂತಲೂ ಮಾನವನಲ್ಲಡಗಿರುವ ದಾನವತ್ವಕ್ಕೆ ಸಾಕ್ಷಿ. ನಿಸ್ಸಂಗಿಗಳನ್ನು ದಾರಾಸುತಾದಿ ಸೂತ್ರ ಬಂಧಿತ ಸಂಗಿಗಳೆಂತಲೂ, ದಿವ್ಯ ಮಾನಸರನ್ನು ಮತಿ ವಿಕಲವೆಂತಲೂ, ಸನಾಡ ಪುರುಷರನ್ನು

ಐಂದ್ರಜಾಲಿಕರೆಂತಲೂ ಕರೆದು ದೂಷಿಸುವ ಆಸ್ತಿಕ ರೂಪೀ ನಾಸ್ತಿಕರು ಅಂದಿನಿಂದ ಇಂದಿನವರೆಗೂ ಇರುವರೆಂಬುವಕ್ಕೆ—ಶ್ರೀಮನ್ನಿರಂಜನ ಶ್ರೀ ಗುರುಮಲ್ಲೇಶ್ವರರ ಬಗ್ಗೆ ಪ್ರಕಟವಾಗಿರುವ ಹಲಕೆಲವು ಗ್ರಂಥಗಳು ಶ್ರುತಪಡಿಸುತ್ತಿವೆ !

ಸಮುದ್ರ ಘನವೆಂಬೆನೆ? ಧರೆಯ ಮೇಲಡಗಿತ್ತು !
ಧರೆ ಘನವೆಂಬೆನೆ? ನಾಗೇಂದ್ರನ ಫಣಾಮಣಿಯ
ಮೇಲಡಗಿತ್ತು !
ನಾಗೇಂದ್ರ ಘನವೆಂಬೆನೆ? ಪಾರ್ವತಿಯ ಕಿರುಕುಣಿಕೆಯ
ಮುದ್ರಿಕೆಯಾಯಿತ್ತು !
ಅಂತಹ ಪಾರ್ವತಿ ಘನವೆಂಬೆನೆ? ಪರಮೇಶ್ವರನ ಅರ್ಧಾಂಗಿ
ಯಾದಳು !
ಅಂತಹ ಪರಮೇಶ್ವರ ಘನವೆಂಬೆನೆ? ನಮ್ಮ ಕೂಡಲ ಸಂಗನ
ಶರಣರ ಮನದ ಕೊನೆಯ ಮೇಲಡಗಿದನು !

ತಮ್ಮ ಅಂತರಾತ್ಮನ ಪ್ರಭೆಯನ್ನು ಸದಾ ನವನವೋನ್ಮೇಷಶಾಲಿನಿಯಾಗಿಸಿ ತಮ್ಮ ಅಂತರಂಗ ಧೀಶಕ್ತಿಯಿಂದ ಸದಾ ಪ್ರಜ್ವಲಿಸುವಂತೆ ಮಾಡಿಕೊಂಡ ನಮ್ಮ ಶರಣರು ಶಿವನಿಗಿಂತಲೂ ಮೇಲು. ಅಂತಹ ಮಹಾಮಹಿಮನಾದ ಶ್ರೀಮನ್ನಿರಂಜನ ಶ್ರೀ ಗುರುಮಲ್ಲೇಶನ ನೈಜ ಜೀವನ ಚರಿತ್ರೆ ಗಾ-ಮರುಧರೆಯಲ್ಲಿ ನೀರ ಹನಿಗಾಗಿ ತಹತಹಿಸುತ್ತಿರುವ ಪಥಿಕನಂತೆ, ಊರುಗೋಲನ್ನು ಈಡಾಡಿಕೊಂಡ ಕುರುಡನಂತೆ, ಘೋರಾರಣ್ಯದಲ್ಲಿ ದಾರಿಯರಿಯದೆ ಕಂಗಾಲಾಗಿ ನಿಂತವನಂತೆ--ಅಸಂಖ್ಯಾತ ಭಕ್ತರಿಗೆ ಲಿಂಗೈಕ್ಯರಾದ ಶ್ರೀ ಶ್ರೀ ಬಸವಣ್ಣ ಮಹಾಸ್ವಾಮಿಗಳವರು "ಶ್ರೀ ಗುರುಮಲ್ಲೇಶ ಮಹಾತ್ಮೆ" ಎಂದು ಬರೆದಿರಿಸಿದ್ದ ಕೈಬರೆಹದ ಪ್ರತಿ ದೊರಕಿದುದು-ಕಣ್ಣು ಕಳೆದುಕೊಂಡವನಿಗೆ ಕಣ್ಣು ಕೊಟ್ಟಂತೆ, ಬಾಯಾರಿದವನಿಗೆ ನೀರಿತ್ತಂತೆ, ದಾರಿ ಕಾಣದವನಿಗೆ ದಾರಿ ತೋರಿಸಿದಂತಾಗಿದೆ.

ದೇವನೂರು ಶ್ರೀ ಮಠದ ಅಸಾಧಾರಣ, ಅಲೌಕಿಕ ದಿವ್ಯಾತ್ಮರಾದ ಮಹಾತ್ಮರ ಪರಂಪರೆಯಲ್ಲಿ ಒಬ್ಬರಾಗಿ ಪೂಜ್ಯ ಗುರು ಪಟ್ಟವನ್ನು ಸ್ವೀಕರಿಸಿ, ಅಗಣಿತ ಭಕ್ತಾದಿಗಳ ಹೃತ್ಕಮಲಗಳಲ್ಲಿ ಸದಾ ವಾಸಿಸುವ ಸುಕೃತವಾಂತ ಮಹಾತ್ಮರು-ಸಹಜವಾಗಿಯೇ ತಾವು ವಹಿಸಿಕೊಂಡ ಶ್ರೀ ಮಠದ ಸೂತ್ರಗಳ ಮೂಲ ಗುರುಗಳ ವಿಷಯವಾಗಿಯೂ, ಅನಂತರ ಆ ಪರಂಪರೆಯಲ್ಲಿ ಅರಳಿ, ಪಾರಮಾರ್ಥಿಕ ಪರಿಮಳವನ್ನು ಬೀರಿದ ಗುರುಗಳ ವಿಷಯವಾಗಿಯೂ-ಕರ್ಣಾಕರ್ಣಿಯಾಗಿ ಅವ ವರ ನೈಜ ಜೀವನವನ್ನು ನಿಶ್ಚಿತವಾಗಿಯೂ ತಿಳಿದೇ ತಿಳಿದಿರುತ್ತಾರೆಂಬುದನ್ನು ಯಾರೂ ಅಲ್ಲಗಳೆಯಲಾರರು. ಅಂತೆಯೇ ಶ್ರೀ ಮಠದ ಅಧ್ಯಕ್ಷರಾಗಿ, ಶ್ರೀ ಗುರುಮಲ್ಲೇಶ್ವರರ ಬಗ್ಗೆ ಅನನ್ಯ ಭಕ್ತಿಯನ್ನು ಹೊಂದಿದ್ದು, ಗುರುಮಲ್ಲೇಶ್ವರನೇ ಮಮ ಪ್ರಾಣವಾಗಿದ್ದ ಶ್ರೀ ಶ್ರೀ ಬಸವಣ್ಣಸ್ವಾಮೀಜಿಯವರು ತಮ್ಮ ಬಿನ್ನಹದಲ್ಲಿ ವಿಜ್ಞಾಪಿಸಿಕೊಂಡಿರುವಂತೆ ಶ್ರೀ ಮಠಕ್ಕೆ ಬಂದು ಹೋಗುವ ಅಸಂಖ್ಯಾತ ಭಕ್ತರು ಗುರುಮಲ್ಲೇಶ್ವರರ ಬಗ್ಗೆ ಒಂದು ಜೀವನ ಚರಿತ್ರೆಯನ್ನು ಕೊಡಿ ಎಂದು ಬಯಸಿ ಕೇಳಿದರೆ, ಕೊಡಲು ಯಾವ ಕೃತಿಯೂ ಇಲ್ಲದಿದ್ದುದರಿಂದಲೂ, ಗುರುಮಲ್ಲೇಶನ ಬಗ್ಗೆ ಸತ್ಯಾಂಶವನ್ನು ತಿಳಿಸದೆ, ಅಪಸ್ವಕ್ಕೆ ಅಪ್ಪಣೆಯೇ ಇಲ್ಲವೆಂಬಂತೆ ಬರೆದ ಹಲವು ಕ್ಷುಲ್ಲಕ ಮನೋಭಾವದ ಅಲ್ಪ ಮಟ್ಟದ ಕೃತಿಗಳಲ್ಲಿ ಅಡಗಿರುವ ದೋಷವನ್ನು ನಿವಾರಿಸಿ, ಏನು ಸತ್ಯಾಂಶವಿದೆಯೋ ಅದನ್ನು ತಿಳಿಸುವ ದೃಷ್ಟಿಯಿಂದಲೂ ಮತ್ತು ಶ್ರೀ ಮಠಕ್ಕೆ ಸೇವೆ ಸಲ್ಲಿಸಿದ ಶ್ರೀ ಗುರು ಪರಂಪರೆಯವರ ಚರಿತ್ರೆಯನ್ನು ಓದಿ ಭಕ್ತರು ಪಾವನರಾಗಲಿ ಎಂಬ ಭಾವನೆಯಿಂದಲೂ ಬರೆದಿರುವ ಈ ಕೃತಿ " ಶ್ರೀ ಗುರುಮಲ್ಲೇಶ ಮಹಾತ್ಮೆ " ಯನ್ನು -ಸಂಗ್ರಹ ರೂಪದಲ್ಲಿ 1917 ನೇ ಇಸವಿಯಿಂದ ತಾವು ಕಂಡುಂಡ ಕೇಳಿ ತಿಳಿದ ಸ್ವಾನುಭವ ವೇದ್ಯವಾದ ಅಂಶಗಳ ಆಧಾರದ ಮೇಲೆ ವಿರಚಿಸಿ ಶ್ರೀ ಗುರುವಿನ ನೈಜ ಚಿತ್ರಣವನ್ನು ನಮಗೆ ಕೊಟ್ಟದ್ದು ನಮ್ಮೆಲ್ಲರ ಸುಕೃತವೆಂದೇ ತಿಳಿಯಬೇಕು. ಈ ಕೃತಿಯ ಕರ್ತೃಗಳಾದ ಸದ್ಗುರು ಶ್ರೀ ಬಸವಣ್ಣಸ್ವಾಮಿಜೀಯವರಿಗೆ ನಮ್ಮ ಭಕ್ತಿಪೂರ್ಣ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಕೈ ಬರೆಹದ ಕೃತಿಯಾಗಿಯೇ ಉಳಿದಿದ್ದ ಈ ಶರಣಚರಿತೆಯನ್ನು ಇದ್ದು ದಿದ್ದಂತೆಯೇ, ಮೂಲಕೃತಿಗೆ ಚ್ಯುತಿ ಬಾರದಂತೆ ಪ್ರಕಟಿಸಿ ತಮ್ಮ ಗುರುವಿಗೆ ಭಕ್ತಿಪೂರ್ಣ ಕಾಣಿಕೆಯನ್ನು ನೀಡಬೇಕೆಂಬ ಮಹದಾಶೆ ಯನ್ನು ಹೊಂದಿದ್ದ ನಮ್ಮ ಸನ್ಮಠಾಧೀಶರೂ, ಅಭಿನವ ಗುರುಮಲ್ಲೇಶ್ವ ರರೂ ಆದ ಶ್ರೀ ಶ್ರೀ ಮಹಂತಸ್ವಾಮಿಗಳವರು ತಾವು ಇಂದು ನಡೆಸುತ್ತಿ ರುವ ಶ್ರೀ ಗುರುಮಲ್ಲೇಶ್ವರ ವಜ್ರಮಹೋತ್ಸವದ ಅಂಗವಾಗಿ ಈ ಕೃತಿ ಯನ್ನು ಪ್ರಕಟಿಸಲು ನಮಗೆ ಆಜ್ಞೆಯಿತ್ತು ತಮ್ಮ ಗುರುಕಾಣಿಕೆಯನ್ನು ಈ ಮೂಲಕ ಸಲ್ಲಿಸುತ್ತಿರುವ ಶ್ರೀಗಳ ಪಾದಪದ್ಮಗಳಿಗೆ ಅನನ್ಯ ಭಕ್ತಿ ಯಿಂದ ನಮಿಸುತ್ತೇವೆ.

"ಶ್ರೀ ಗುರುಮಲ್ಲೇಶ ಮಹಾತ್ಮೆ" ಕೃತಿಗೆ ಕಲಶವಿಟ್ಟಂತೆ ತಮ್ಮ ಭಾವಪೂರ್ಣವಾದ, ವಿದ್ವತ್ಪೂರ್ಣವಾದ, ಆತ್ಮೀಯವಾದ ಸಾರತರ ಮುನ್ನುಡಿಯನ್ನು ಬರೆದು ಈ ಕೃತಿಗೆ ಮೆರಗು ತಂದಿರುವ ಅಭಿನವ ಅಲ್ಲಮರಂತೆ, ಕನ್ನಡದ ವಿವೇಕಾನಂದರಂತೆ ರಾರಾಜಿಸುತ್ತಿರುವ ಶ್ರೀ ಸಿದ್ಧಗಂಗಾ ಮಠಾಧೀಶರಾದ ಡಾ|| ಶಿವಕುಮಾರಸ್ವಾಮಿಗಳವರ ಅಡಿದಾ ವರೆಗಳಲ್ಲಿ ಅನನ್ಯ ಭಕ್ತಿಯಿಂದ ಉದ್ದಂಡ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಶ್ರೀ ಶ್ರೀ ಬಸವಣ್ಣಸ್ವಾಮಿಜೀಯವರ ಕೃತಿಯ ಭಾಗ ಮುಕ್ತಾಯ ಗೊಂಡ ಅನಂತರದ ೧೨, ೧೩ ಮತ್ತು ೧೪ನೇ ಅಧ್ಯಾಯಗಳಲ್ಲಿ ತದ ನಂತರದ ಶ್ರೀ ಮಠದ ಬೆಳವಣಿಗೆಯನ್ನು ಸಾರಸಂಗ್ರಹವಾಗಿ ಸುವೇದ್ಯ ಗೊಳಿಸಿದ ಶ್ರೀ ಡಿ. ಎಂ. ಮಹದೇವಮೂರ್ತಿ, ಬಿ. ಎ. ಬಿ. ಎಡ್., ಅವರಿಗೂ ನಮ್ಮ ಅನಂತ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ

ಶ್ರೀ ಗುರುಮಲ್ಲೇಶ್ವರ ವಜ್ರಮಹೋತ್ಸವದ ಪ್ರಧಾನ ಕಾರ್ಯ ದರ್ಶಿಗಳೂ ಶ್ರೀ ಗುರುವಿನ ನಿರ್ಮಲ ಸೇವಕರೂ ಆದ ಶ್ರೀ ಡಿ. ಎಂ. ಸಿದ್ಧಯ್ಯ, ಎಂ. ಎ. ಅವರು ವಜ್ರಮಹೋತ್ಸವದ ಅಂಗವಾಗಿ ಒಂದು ಮಹಾನ್ ಕೃತಿಯನ್ನು ಹೊರತರಬೇಕೆಂದು ಆಶಿಸಿದರು. ಅದರ ಫಲ

ವಾಗಿ ಶ್ರೀ ಗುರುಮಲ್ಲೇಶ್ವರರ ಬಗ್ಗೆ ಸತ್ಯಾಂಶಗಳಿಂದ ಪ್ರಕಟಿಸುವಲ್ಲಿ—ಮುಂದೆ ನಿಂತು ಮಾರ್ಗದರ್ಶನ ಸರ್ವ ಸಹಾಯಗಳನ್ನು ನೀಡಿದುದಕ್ಕೆ ಅವರಿಗೆ ನಮ್ಮ ಅನಂತಾನಂತ ಕೃತಜ್ಞತೆಗಳನ್ನರ್ಪಿಸುತ್ತೇವೆ.

ಈ ಕೃತಿಯ ಪ್ರಕಾಶನಕ್ಕೆ "ಶ್ರೀ ಗುರುಮಲ್ಲೇಶ್ವರರ ವಜ್ರ ಮಹೋತ್ಸವ" ಒಂದು ಸದವಕಾಶವಾಗಿ ಒದಗಿ ಬಂದುದು ನಮ್ಮೆಲ್ಲರ ಪುಣ್ಯ. ವಜ್ರಮಹೋತ್ಸವ ಸಮಿತಿಯವರು ಈ ಕೃತಿಯ ಪ್ರಕಟಣೆಯಲ್ಲಿ ಸರ್ವ ಸಹಾಯ ನೀಡಿದ್ದಾರೆ. ಅವರಿಗೂ ಮತ್ತು ವಜ್ರಮಹೋತ್ಸವದ ಅಂಗವಾಗಿ ರಚಿಸಲ್ಪಟ್ಟ ಸಾಹಿತ್ಯ ಸಮಿತಿಯವರಿಗೂ ಇದರ ಪ್ರಕಟಣೆಯಲ್ಲಿ ನೆರವಾದ ಎಲ್ಲರಿಗೂ ನಾವು ಆಭಾರಿಗಳಾಗಿದ್ದೇವೆ.

ಈ ಕೃತಿಯನ್ನು ಅಚ್ಚುಕಟ್ಟಾಗಿ ಹೊರತರುವಲ್ಲಿ, ನಿರ್ದುಷ್ಟವಾಗಿ ಕರಡು ತಿದ್ದಿದ ಸುಪ್ರಸಿದ್ಧ ಕಥೆಗಾರರೂ, ಮೈಸೂರಿನ ಜೆ. ಎಸ್. ಎಸ್. ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರೂ ಆದ ಶ್ರೀ ವೀರಭದ್ರ ಎಂ. ಎ., ಅವರಿಗೂ, ಈ ಕೃತಿಯನ್ನು ಮುದ್ದಾಗಿ ಮುದ್ರಿಸಿದ ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್‌ನ ಒಡೆಯರಿಗೂ, ಅಚ್ಚುಕೂಟದ ಮಿತ್ರರಿಗೂ ನಮ್ಮ ನೆನಕೆಗಳು ಸಲ್ಲುತ್ತವೆ.

ಶರಣರು ಮೆಟ್ಟಿದ ಧರೆ ಪಾವನ, ಅವರು ತುಳಿದ ಮರಳು ಮಾಣಿಕ್ಯ, ಅವರ ನುಡಿ ಲಿಂಗಕ್ಕೆ ಆಪ್ಯಾಯ. ಅಂತಹ ಪರಮಪಾವನ ಮಹಾಮಹಿಮನಾದ ಶರಣನೊಬ್ಬನ ಮತ್ತು ಅನಂತರದ ಗುರುಪರಂಪರೆಯವರ ಚರಿತ್ರೆಯನ್ನು ಓದುವ ನಮ್ಮ ನಿಮ್ಮೆಲ್ಲರ ಭವನಾಶವಾಗಿ, ನಮ್ಮೆಲ್ಲರ ಇಷ್ಟಾರ್ಥಗಳು ಕೈಗೂಡಿ, ಲಿಂಗಾಂಗ ಸಾಮರಸ್ಯದ ಸಿದ್ಧಿನೆಲೆಯನ್ನು ನಾವೆಲ್ಲ

ಹೊಂದುವುದರಲ್ಲಿ ಲೇಶಮಾತ್ರವೂ ಸಂಶಯವಿಲ್ಲವೆಂದು ಶ್ರೀ ಗುರುವಿನ ಚರಣಾರವಿಂದಗಳಲ್ಲಿ ಅನಂತ ಕೋಟ್ಯಂತರ ನಮನಗಳನ್ನು ಸಲ್ಲಿಸಿ ವಿರಮಿಸುತ್ತೇವೆ.

'ಓಂ ತತ್‌ಸತ್'

ಇತಿ,

ದೇವನೂರು
೨೯-೩-೧೯೭೩

ಶ್ರೀ ಮನ್ನಿರಂಜನ ಶ್ರೀ ಗುರುಮಲ್ಲೇಶ್ವರ
ವಜ್ರಮಹೋತ್ಸವ ಸಾಹಿತ್ಯ ಸಮಿತಿ.







# ಶ್ರೀ ಗುರುಮಲ್ಲೇಶನೇ ಗತಿ

ನನ್ನ ಗುರುವೇ ಗುರುವಿನ ಗುರುವೇ
ಚಿನ್ಮಯ ಗುರುಮಲ್ಲೇಶ ಗುರುವೇ
ನಿನ್ನ ಚರಣ ಸ್ಮರಣೆಯೊಳಿರುವೇ
ಚಿನ್ನದ ಕಲಶದ ಪ್ರಭುವೇ || ಪ ||

ನಿನ್ನ ಮಹಿಮೆಯ ಬರೆಯುವೆ ನಂಬಿ
ಎನ್ನ ಕರಮನ ಭಾವ ತುಂಬಿ
ಅನ್ಯವನರಿಯೇ ನಿನ್ನೇ ನಂಬಿ
ನಿನ್ನ ಪಾದಾಂಬುಜಕಾಂ ಮರಿದುಂಬಿ || ೧ ||

ಹೇಮ ಭೂಮಿಯಾಸೆಗೋಸುಗ
ಸ್ವಾಮಿ ನಿನ್ನ ಸಂಸಾರಿಯೆಂದಘ
ಪಾಮರ ಪಂಡಿತರೊರೆವರೀಗ
ಕಾಮನಾಶ ನಿರಂಜನ ನಿರಘ || ೨ ||

ಲೇಖಕನ ಕರಲೇಖಣಿಯಂತೆ
ಶ್ರೀಕರ ನಿನ್ನಯ ಚರಣದ ಬೊಂತೆ
ಈ ಕುವರ ಬಸವನು ರಚಿಪಂತೆ
ನೀ ಕರುಣಿಸು ನಿನ್ನಿರವಿಪ್ಪಂತೆ || ೩ ||

[ಶ್ರೀ ಬಸವಣ್ಣಸ್ವಾಮಿ]

—ಓಂ—

## —: ಶ್ರೀ ಗುರುಮಲ್ಲೇಶನೇ ಗತಿ :—

# ಶ್ರೀ ಶ್ರೀ ಬಸವಣ್ಣ ಮಹಾಸ್ವಾಮಿಯವರ ಬಿನ್ನಪ.

ಸೇವ್ಯ ಶ್ರೀ ಗುರುಸ್ವಾಮಿ ಕರ ಸಂ |
ಜೀವನೋದಯ ಭಿಕ್ಷದಾರ್ಯ ಸು |
ಭಾವ ಕರಜ ಶಿವಾರ್ಯ ಪ್ರಭುವಿನ |
ಪಾವನಾಂಘ್ರಿಜ ನಾಂ ಬಸವ ನಿಜ ||

ಶ್ರೀ ದೇವನೂರುಮಠದ ಇತಿಹಾಸವೆಂದರೆ ಲೋಕದಲ್ಲಿ ಯಾರೂ ಕೇಳದವರಿಲ್ಲ. ಅಷ್ಟೇ ನೈಜವಾಗಿ ಕೇಳಿದವರೂ ಇಲ್ಲ. ದೇವನೂರು ಮಠ ಎಂದರೆ "**ಶ್ರೀ ಗುರುಮಲ್ಲೇಶ**" ನೆಂಬ ಸ್ಫೂರ್ತಿ ಕೇಳಿದೆಲ್ಲರ ಹೃದಯದಲ್ಲೂ ಭಾಸವಾಗಿ ಬಿಡುತ್ತದೆ. ಕೂಡಲೇ ಬಹಿರ್ದೃಷ್ಟಿಯಲ್ಲಿದ್ದ ನೇತ್ರಗಳೂ ಅರೆ ಮುಗಿದುವಾಗಿ ಅಂತರ್ದೃಷ್ಟಿಯಿಂದ ಕರಣಾದಿಗಳೆಲ್ಲವೂ ಶರಣು ಹೊಕ್ಕು ಪರವಶವಾಗಿ ಬಿಡುತ್ತವೆ. ಇಂಥಾ ಮ ಹ ನೀ ಯ ನ ಮತ್ತು ಮಠದ ಸ್ಥಳಪುರಾಣವನ್ನು ತಿಳಿದುಕೊಳ್ಳುವ ಮಹದಾಶೆಯಿಂದ ಹಾಗೂ ನೋಡಿ ಪವಿತ್ರರಾಗುವ ಅಪೇಕ್ಷೆಯಿಂದ ದೂರದೇಶಗಳಿಂದ ಬಂದ ಬಂದವರೆಲ್ಲಾ ಕೇಳಿ ಕೇಳಿ, ಇಲ್ಲವೆಂದಾಗ ನಿರಾಶರಾಗಿ ಹೋಗುತ್ತಿರುತ್ತಾರೆ. ಈ ಬಗ್ಗೆ ಹಿಂದಿನಿಂದಲೂ ಬಹಳ ದೊಡ್ಡ ದೊಡ್ಡ ವಿದ್ಯಾವಂತರೂ, ವಿಶೇಷ ವಿಚಾರಪರರೂ, ಆಗರ್ಭ ಅನುಭಾವಿಗಳೂ, ನಿಷ್ಪಕ್ಷಪಾತಿಗಳೂ, ತತ್ವವೇತ್ತರೂ, ಕವಿತಾಶಕ್ತಿಯ ವಾಗ್ಮಿಗಳೆಲ್ಲಾ ಇದ್ದೂ ಕೂಡ ಬರೆದಿಡದೆ ಪ್ರಚಾರಕಾರ್ಯಗಳಿಗೆ ಇದುವರೆಗೂ ಕೈಯಿಡದೆ ಇರ್ದುದೊಂದು ಮಹ ದಾಶ್ಚರ್ಯವೆಂದು ನನಗನ್ನಿಸುತ್ತದೆ. ಈ ಸರ್ವಪೂಜ್ಯ ಮಹಾಸಂಸ್ಥೆ ಯಲ್ಲಿದ್ದುಕೊಂಡೇ ಸರ್ವವನ್ನೂ ಸ್ವಾಹಗೈವ ಸ್ವಾರ್ಥಸಾಧಕರ ಸಂಭಾ ವನೆಗೊಳಗಾಗಿ ಸ್ವರೂಪವೆತ್ತಿರುವ ಕೆಲವು ಹೊತ್ತಗೆಗಳು ಅಬದ್ಧಕ್ಕೆ

ಅಸ್ಪಣೆಯೇ ಇಲ್ಲವೆಂಬಂತೆ, ಅಚ್ಚ ಲೌಕಿಕ ಭಾವನೆಯಲ್ಲಿ ಮುಳುಗಿ ವ್ಯರ್ಥವಾಗಿಬಿಟ್ಟವೆ. ಈ ಆಧಾರಗಳಿಂದಲೇ ಶ್ರೀ ಸಿದ್ದಯ್ಯಪುರಾಣಿಕರೂ ತಮ್ಮ ಶರಣಚರಿತಾಮೃತ ಪುಸ್ತಕದಲ್ಲಿ ಶ್ರೀ ಗುರುಮಲ್ಲೇಶ್ವರರ ವಿಷಯ ವನ್ನು ಅದೇ ರೀತಿ ಬರೆದಿರುತ್ತಾರೆಂದು ತಿಳಿದುಬರುತ್ತದೆ. ಇಲ್ಲದ ಲೋಪವನ್ನುಂಟುಮಾಡಿ, ಉಳ್ಳ ಬ್ರಹ್ಮವನಿಲ್ಲದಂತೆ ಮಾಡಿರುವ ಈ ಕೆಲವು ಕಾರಣಗಳಿಂದಲೂ ಸತ್ಯ ತಾತ್ವಿಕವಾದ ಈ ಮಹಾಸಂಸ್ಥೆಯ ಮತ್ತು ಮೂಲಮೂರ್ತಿಯ ನೈಜಾಂಶವು ಆಚಂದ್ರಾರ್ಕವಾಗಿ ಭಕ್ತ ಮಂಡಲಿಯ ಹೃತ್ಸರೋಜದಲ್ಲಿ ಬೆಳೆದು ಬೆಳಗುತ್ತಿರಲೆಂಬ ನಿಮಿತ್ತವೂ, ದಿನೇ ದಿನೇ ಸಂದರ್ಶನಾಕಾಂಕ್ಷೆಯಿಂದ ಬಂದು ಹೋಗುವ ಭಕ್ತ ಸಮೂಹವು ಇದರ ಸ್ಥಳಪುರಾಣವೇನಿದೆ ಕೊಡಿ ನೋಡಬೇಕೆಂದಾಗಿ ಹಾತೊರೆಯುತ್ತಿರುವುದರಿಂದಲೂ, **"ಶ್ರೀ ಗುರುಮಲ್ಲೇಶ್ವರ ಮಹಾತ್ಮೆ"** ಎಂಬ ಈ ಚಿಕ್ಕ ಪುಸ್ತಕವನ್ನು ಬರೆಯಬೇಕೆಂಬ ಕುತೂಹಲ ವುಂಟಾಗಿ ಶ್ರೀ ಶರಣಲೀಲಾಮೃತವನ್ನೇ ಮೊದಲು ಮಾಡಿಕೊಂಡು ಈ ಪವಿತ್ರ ಸನ್ನಿಧಿಯ ವಾಙ್ಮೂಲವನ್ನೆಲ್ಲಾ ಚೆನ್ನಾಗಿ ನೋಡಿ ಕೇಳಿ ತಿಳಿದು ಅನುಭವಿಸಿರುವ ಹಿರಿಯರಿಂದೆಲ್ಲಾ ಹೊರಬರುವ ವಿಚಾರ ವಿಷಯಗಳನ್ನು ಸಂಗ್ರಹಿಸಿ, ಶೃತಿ ಗುರು ಸ್ವಾನುಭವ ಮೂಲಕ ಸರ್ವರಿಗರಿಯುವಂತೆ ತಿಳಿಗನ್ನಡದ ಗದ್ಯರೂಪದಲ್ಲಿ ರಚಿಸಲಾಗಿದೆ. ಅಲಕ್ ನಿರಂಜನ ಗುರು ಮಲ್ಲೇಶ ಮಹತ್ತೆಂಬ ಅತ್ಯಂತ ಆಳವಾದ ಹಾಗೂ ಅಪಾರವಾದ ಅಮೃ ತಾಂಬುಧಿಯಲ್ಲಿ ಸುಧಾರಸವನ್ನು ಕಪ್ಪೆಯ ಚಿಪ್ಪಿನಲ್ಲಿ ತುಂಬಿಟ್ಟಂತೆ ಈ ಕಿರುಹೊತ್ತಗೆಯನ್ನು ಭಕ್ತಮಂಡಲಿಯ ಕರಕಮಲಕ್ಕೆ **"ಶ್ರೀ ಗುರು ಮಲ್ಲೇಶ ಮಹಾತ್ಮೆ"** ಎಂಬುದಾಗಿ ಅರ್ಪಿಸುತ್ತಿದ್ದೇನೆ. ಇನ್ನಿದರಲ್ಲಿ ಯಾವ ನ್ಯೂನತೆಗಳು ಕಂಡುಬಂದಾಗ್ಯೂ ಅಲ್ಲದೆ ಮತ್ತಾವ ವಿಷಯ ಸಾರವು ಬಿಟ್ಟು ಹೋಗಿದ್ದಾಗ್ಯೂ ಸುಜ್ಞರು ತಿಳಿಸಿಕೊಟ್ಟಲ್ಲಿ ಮುಂದೆ ತಿದ್ದಿಕೊಳ್ಳಲಾಗುವುದು.

**ಶ್ರೀ ಬಸವಣ್ಣಸ್ವಾಮಿ**





ಶ್ರೀ ಮನ್ನಿರಂಜನ ಗುರುಮಲ್ಲೇಶ್ವರರು



– ಶ್ರೀಗುರು ಬಸವಲಿಂಗಾಯ ನಮಃ –

# ಶ್ರೀ ಗುರುಮಲ್ಲೇಶ ಮಹಾತ್ಮೆ

## ಅಧ್ಯಾಯ ೧

ಅನಾದಿ ಪರಶಿವನ ಲೀಲಾಮಾತ್ರದಿಂದಾದ ಈ ಜಗತ್ತಿನಲ್ಲಿ ಪ್ರಖ್ಯಾತಿಪಡೆದ ಭಾರತ ಪುಣ್ಯಭೂಮಿ. ಇನ್ನಿದರೊಳನಂತ ಕೋವಿದರೊಲಿದು ಬಣ್ಣಿಸಲಸಾಧ್ಯವಾದ ಸಂಪತ್ಸಮೃದ್ಧಿಯ ಏಳ್ಗೆಯಿಂದ ಮೆರೆದು ಸರ್ವಲಕ್ಷಣ ಲಕ್ಷಿತೆಯಾದ ಭೂದೇವಿಯ ಕಂಠ ಮಾಲೆಯಲ್ಲೊಪ್ಪುವ ಮಾಂಗಲ್ಯದಂತೆ ಪರಿಶೋಭಿಸುತ್ತಿದೆ ಚೆಲುವೆತ್ತ ಸಿರಿಸೊಬಗಿನ ಕನ್ನಡ ನಾಡು! ಇದು ಸರ್ವಧರ್ಮ ಸಮನ್ವಯವನೊಳಗೊಂಡು ಬೆಳೆದು ಬೆಳಗುವ ಪರಮಪವಿತ್ರ ವೀರಶೈವವೆಂಬ ಆಧ್ಯಾತ್ಮಿಕ ತತ್ವ ಸುಮಧುರದ ಜೇನುಗೂಡು. ಯುಗ ಯುಗಗಳಿಂದಲೂ ಜಗತ್ತು ಸತ್ಯ–ತಾತ್ವಿಕವೆಂಬ ಸುಭದ್ರವಾದ ತಳಹದಿಯ ಮೇಲೆ ನಿಂತು ಸದ್ಧರ್ಮ ಚೇತನದಿಂದ ವರ್ತಿಸುತ್ತಿರುವುದು ಶಿವಾಜ್ಞೆಯಾಗಿರುವುದು. ಶಿಥಿಲ ಸ್ಥಿತಿಗೆ ಬಂದಾಗ ಶಿವಾಂಶಸಂಭೂತರೊಬ್ಬೊಬ್ಬರುದಯಿಸಿ ಉರಿಯುತ್ತಿರುವ ದೀಪಕ್ಕೆ ಮತ್ತೆ ತೈಲವನೆರೆದು ಬತ್ತಿಯನ್ನು ಚಾಚಿ ಗಾಳಿಯಿಂದ ಅಲೆಯಾಗದ ಹಾಗೆ ಮಾಡಿ ಪುಟಗೊಳಿಸುವುದರಂತೆ, ಸದ್ಧರ್ಮ ಚೇತನಗೊಟ್ಟು ಪುಷ್ಟೀಕರಿಸುವುದು ಸ್ವಾಭಾವಿಕವಾದುದಾಗಿದೆ.

ಅಂತೆಯೇ ಹನ್ನೆರಡನೆಯ ಶತಮಾನದಲ್ಲಿ ಖಿಲವಾಗಿದ್ದ ವೀರಶೈವ ಮತವನ್ನು ಸರಿಯಾದ ರೀತಿ ನೀತಿಗಳಿಂದ ಪುನರುಜ್ಜೀವನಗೊಳಿಸಲು ಕೈಲಾಸದಿಂದ

ಹರನಾಜ್ಞೆಯಂ ಪೊತ್ತು ಭೂತಲದೊಳವತರಿಸಿ |
ಪರಮಭಕ್ತಿ ಜ್ಞಾನವಿರತಿಗಳನಾಚರಿಸಿ |
ಇರದೆನಿಪಸಂತ ಮಹಿಮೆಗಳನುರೆಬಿತ್ತರಿಸಿ ಷಟ್‌ಸ್ಥಲಾ
ಮಲಶಾಸ್ತ್ರದಾ ||

ತಿರುಳನೆಲ್ಲವನಚ್ಚಗನ್ನಡದ ತಿಳಿನುಡಿಯೊ |
ಳೊರೆದು ಶಿವಮತವನುದ್ಧರಿಸಿ ಸಲಹಿದ ಬಸವ |
ಗುರು ಚೆನ್ನಬಸವೇಶ್ವರಲ್ಲಮಾದಿ ಪ್ರಮಥಪುಂಗವರು ||

ಮರ್ತ್ಯದಲ್ಲುಳಿದ ಮಹಾಗಣಂಗಳಿಗೆ ಮುಂಬರುವ ಭವಿಷ್ಯತ್ಸೂಚನೆಯ ಎಚ್ಚರಿಕೆಗೊಡುತ್ತಾ ಹೇಳಿದ್ದೇನೆಂದರೆ

ಕಲಿ ಹೆಚ್ಚಿ ನಡೆಯುತಿದೆ | ಕರ್ಮಕೇಡಾಗಿ ಜನ |
ಮಲಹರನ ಕೃಪೆ ತಪ್ಪಿ | ಮಡಿವುತಿದೆ ಮುಂದೆ
ಗುರುದೈವ ತಾಯ್ತಂದೆ | ಹಿರಿದು ಕಿರಿದೆನ್ನದೆ
ಭಕ್ತರು ಸ್ಥಾಪ್ಯ ಸದ್ಭಕ್ತರು | ಭಕ್ತಿಯಲಿ ಅವರೆಲ್ಲಾ |
ಯುಕ್ತಿಗೆಟ್ಟಾರು ||

ಏಳನೂರುವರುಷ ಬಹು | ಕಾಳಗವು ಜಗವೆಲ್ಲ |
ಹಾಳಾಗಿ ನಾವು ಬರೆ ಏಳಿಗೆಯು ಎನ್ನಿ ||
ಹೊತ್ತು ಹೊತ್ತಿಗೆ ಹೊಸ ಕಲಿಯಲ್ಲದೆ |
ಸತ್ಯ ನಡೆಯಿಲ್ಲ .... .... .... .... ||

ಇತ್ಯಾದಿ ಇತ್ಯಾದಿ ಅನಂತಾನಂತ ಪಾಪವೆಗ್ಗಳವಾಗಿ ಕಾಲ ಕಾಮ ಮಾಯೆಗಳಿಗೆ ಬಲಿಯಾಗುವುದೀ ಲೋಕ; ತನ್ಮಧ್ಯೆ ನೀವುಗಳು ಬಹಳ ಎಚ್ಚರಿಕೆಯಿಂದ ಜಲಲೇಪವಿಲ್ಲದ ಕಮಲದಂತೆಯೂ, ಹುಡಿ ಹತ್ತದ ಗಾಳಿಯಂತೆಯೂ, ನೈಹತ್ತದ ನಾಲಗೆಯಂತೆಯೂ, ಕಾಡಿಗೆ ಹತ್ತದ ಆಲಿಯಂತೆಯೂ,

ನಾವು ಬಹ ತನಕ | ಜೀವಶಾಸ್ತ್ರಗಳ ಅಸು |
ಭಾವದಲಿ ಮೈಮರೆದು | ತೀವಿಕೊಂಡಿಹುದು |

ಮಹನೀಯರೆ, ಈ ಆರಭ್ಯ ಏಳನೂರ ಎಪ್ಪತ್ತು ವರ್ಷಗಳ ನಂತರ ಬರುತ್ತೇವೆ, ತಿಳಿಯಿತೆ, ನಿಮ್ಮೆಲ್ಲರಿಗೂ ಕಾರಣ ಕರ್ತನಾಗಿ

ಈಶ ನಮ್ಮಯ ರೇವಣಸಿದ್ಧೇಶನೆಂದು ದಕ್ಷಿಣ |
ದೇಶದಲಿ ತೋರುವನು ಶಾಂತಮಲ್ಲೇಶನಾಗಿ ||

ಸ್ವಲೀಲಾ ವಿಲಾಸದೊಡನೆ ಮೂಲೋಕದೊಡೆಯನಾದ ಈ ಪ್ರಭು ವಿನ ಮಹತ್ತಿನಿಂದ—

ಮುಕ್ಕಣ್ಣ ಶರಣರಿರ | ಅಕ್ಕರಿಂ ನಿಮಗೆಲ್ಲ |
ಇಕ್ಕಿ ಎರೆಯುವಂಥ ಮನೆ | ದಕ್ಷಿಣದೊಳಿಹುದು ||

ಎಂದು ಮುಂತಾಗಿ ನಡೆಯುವ ಕುರುಹುಗಳಂ ತೋರಿ ಕೈಲಾಸಕ್ಕೆ ಚಿತ್ತೈಸಿದರೆಂಬುದು ಸರ್ವವಿದಿತವಾಗಿದೆ.

ಅದರಂತೆಯೇ ಶ್ರೀ ಶಿವನ ಪಂಚಮುಖದಿಂದುದ್ಭವಿಸಿದ ಆ ಮಹಾ ರೇಣುಕರೇ ಆಗ ರೇವಣಸಿದ್ಧೇಶನೆಂಬಭಿಧಾನದಿಂದಿರುತ್ತಾ, ಅಲ್ಲಿಂದ ಆರೇಳು ಶತಮಾನಗಳನ್ನು ಎಲ್ಲೋ, ಹೇಗೋ, ಯಾವರೂಪಿನಿಂದಲೋ ಮುಗಿಸಿ, ಹದಿನೆಂಟನೆಯ ಶತಮಾನದಲ್ಲಿ ನಮ್ಮೀ ದಕ್ಷಿಣ ದೇಶವೆಲ್ಲಾ, ಹಾಗೂ ವೀರಶೈವರೆಲ್ಲಾ ಅಷ್ಟಾವರಣ, ಪಂಚಾಚಾರ, ಷಟ್ ಸ್ಥಲ ಮಾರ್ಗವನ್ನೆಲ್ಲಾ ಮರೆತು ಏನೂ ಅರಿಯದ ಮೂಢತನದಿಂದ ಪಶುವರ್ತನೆಯ ಜೀವಗುಣವಾವರಿಸಿ ಕೃತಕಿಗಳ ಚಾಣಾಕ್ಷತನಕ್ಕೆ ಬಲಿ ಬೀಳುತ್ತಾ ಅಲ್ಲಲ್ಲಿ ಪಟ್ಟವಿರಕ್ತರ ಮಠಗಳಿದ್ದರೂ ಅವುಗಳಲ್ಲಿ ಸರಿಯಾದ ವಿವೇಕವನ್ನು ಹೇಳಿ ಸನ್ಮಾರ್ಗಕ್ಕೆ ತರುವ ಪ್ರಬಲತರ ಸ್ವಾಮಿಗಳಿಲ್ಲದೆ ಹಸಗೆಟ್ಟು ಮಸಿ ಮಣ್ಣಾಗುತ್ತಿದ್ದ ಕನ್ನಡನಾಡಿನ ಮೈಸೂರಿಗೆ ಕೃಪಾದೃಷ್ಟಿಯನ್ನು ಬೀರುತ್ತಾ,—

**ಕಲಿಯುಗ** ಮಹಿಮೆಯ | ಲಿಂಗಾಂಗ ಧರ್ಮವ |
**ನೆಲೆಯನು** ತೋರುವ ನೇಮದಿ |
**ಛಲದಿ** ಪಂಥವ ಮಾಡಿ | ಕೈಲಾಸ ಸಭೆಯೊಳು |
ಇಳೆಯೊಳು ಬಂದಿಹ ದೇವನು...."

ಶ್ರೀ ಗುರುಮಲ್ಲೇಶ ಬಯಲೇ ರೂಪುಗೊಂಡಂತೆ ಮೈದೋರಿ ಮೈಸೂರಿನಲ್ಲಿದ್ದರು. ಜೊತೆಯಲ್ಲಿ ಘನಲಿಂಗ ಚಕ್ರವರ್ತಿಗಳೆನಿಸಿದ ಶ್ರೀ ಮುಪ್ಪಿನ ಮಹಾಸ್ವಾಮಿಗಳೂ, ಶ್ರೀ ಬೆತ್ತಲಗುಂಡೆ ಸ್ವಾಮಿಗಳೆಂಬ ಮಹನೀಯರೂ, ಇನ್ನೂ ಅನೇಕ ಗಣಾಧೀಶ್ವರರಿರುತ್ತಿದ್ದರು.

ಆಗ ಮೈಸೂರು ಒಳ್ಳೇ ದೈವಭಕ್ತರೂ, ಕರುಣಾರ್ದ್ರ ಹೃದಯರೂ, ಮಹಾಕೀರ್ತಿವಂತರೂ, ಸರ್ವೈಶ್ವರ್ಯ ಸಂಪನ್ನರೂ, ಅಪ್ರತಿಮ ಪರಾಕ್ರಮರೂ ಆದ ದೊರೆ ಮುಮ್ಮಡಿ ಶ್ರೀಕೃಷ್ಣಭೂಪರ ಆಳ್ವಿಕೆಗೊಳಗಾಗಿದ್ದಿತು. ಮೇಲಾಗಿ ಮೊದಲಿಂದಲೂ ಬಹಳ ಜಂಗಮ ಪ್ರೇಮದ ಮನೆತನದವರಿವರು.

ಶ್ರೀ ಗುರುಮಲ್ಲಪ್ಪನವರು ಪ್ರತಿದಿನವೂ ಗಣತೃಪ್ತಿಗೆ ಸತ್ಯಕಾಯಕದ, ನಿತ್ಯ ನೇಮದ ಭಕ್ತಿ ಬೆಳೆಯ ಬಿತ್ತುಗಳನ್ನು ಬಿತ್ತಲು ಪ್ರಪ್ರಥಮ ಮೈಸೂರೆಂಬ ಹೊಲವನ್ನು ತಮ್ಮ ಪಾದಸ್ಪರ್ಶದಿಂದ ಹಸನು ಮಾಡುವುದಕ್ಕೋಸ್ಕರ "**ಕಂಥೆಭಿಕ್ಷೆ**"ದ ಕಾಯಕವನ್ನು ತೊಟ್ಟು ಪರಮಶಿವ ಭಕ್ತರ ಮನೆ, ಗುರಿಕಾರರ ಮನೆ, ಅರಮನೆಗೂ ಸಹ ಹೋಗಿ ಪ್ರಸಾದವನ್ನು ತಂದು ಗುರುಲಿಂಗ ಜಂಗಮರಿಗೆ ಶಿವಾರ್ಪಿತಗೈಸಿ ದಯಾಂತಃಕರಣನಾಗಿ ಅಂಗಹೀನ ದರಿದ್ರರಿಗೆಲ್ಲಾ ಅನ್ನ ಕೊಟ್ಟು ಪುನೀತರನ್ನಾಗಿ ಮಾಡುತ್ತಿದ್ದರು.

ಕಂಥೆಭಿಕ್ಷದ ಕಾಯಕಕ್ಕೆ ಕಲ್ಯಾಣಪಟ್ಟಣದಲ್ಲೂ ಬಹಳ ಪ್ರಾಶಸ್ತ್ಯವಿತ್ತೆಂಬುದು ಕಾಣಬರುತ್ತದೆ. ಹೇಗೆಂದರೆ ಶ್ರೀ ಚೆನ್ನಬಸವಣ್ಣನವರು

ಉಳುವೆಗೆ ದಯಮಾಡುವಾಗ ಶ್ರೀ ರುದ್ರಮುನಿ ಮಹಾಸ್ವಾಮಿಗಳವರನ್ನು ಕರೆಯಹೋಗಿ ಬಿನ್ನೈಸಿ, ನಮಗೆ ನಾಳೆ ಉಳುವೆಯ ಮಹಾಮನೆಗೆ ಪಯಣವಿದೆ, ಸ್ವಾಮಿಯೂ ಚಿತ್ತೈಸಬೇಕೆನ್ನಲು, ನಿಮಗೆ ತಿಳಿಯದ ವಿಷಯವೇನಿದೆ ಚೆನ್ನಬಸವಣ್ಣ ? ನಾವಿಲ್ಲೇ ಇರುತ್ತೇವೆ. ನೀವೆಲ್ಲಾ ಹೋಗಿಬನ್ನಿ. ನೀವು ಕೈಲಾಸಕ್ಕೆ ಹೋಗಿ ಮರಳಿ ಬರುವವರೆವಿಗೂ ನಮ್ಮ ಈ ಚೆಂಗಲ್ವ ಮಂಟಪದಲ್ಲಿದ್ದುಕೊಂಡು ನಮಗೆ ಲಭ್ಯವಾಗಿರುವ ಪ್ರಭುದೇವರ ಗಣಪರ್ವದ ಅಕ್ಷಯ ಮಹಾಪ್ರಸಾದ ಸೇವನೆಯ ಸುಖ ಸಂತೋಷದಿಂದ ಹೊತ್ತುಗಳೆವೆವು.

ರೇವಣ ಸಿದ್ಧಯ್ಯ। ದೇವರಿಗೆ ನೀಲಮ್ಮ।
ಭಾವೆ ನೀಡಿದ ಭಿಕ್ಷ।ತೀವಿ ಪಾತ್ರೆಯಲಿ।
ಅಕ್ಷಯ ಪಾತ್ರೆ ಒಂ। ದಕ್ಷ ಪ್ರಸಾದ ಶಿವ।
ಮೋಕ್ಷವೆಂದಿತ್ತ ಕ। ಟಾಕ್ಷ ನಮ್ಮಯ್ಯ।
ಮತ್ತೆ ನೆತ್ತಿಯ ಕೂಪ। ನಿತ್ಯಕ್ಷೀರಾಹಾರ
ತೃಪ್ತರಪ್ಪೆವು ನಾವು ಚಿತ್ತೈಸಿ ನೀವು॥

ಈ ರೀತಿ ಶ್ರೀ ರುದ್ರಮುನಿ ತಂದೆಯೇ ಹೇಳಿರುವುದರಿಂದ ಶ್ರೀ ರೇವಣಸಿದ್ಧೇಶ್ವರರೇ ಶ್ರೀ ಗುರುಶಾಂತಮಲ್ಲೇಶ ಅಭಿಧಾನದಿಂದ ನಮ್ಮೆಲ್ಲರ ಸದ್ಗುರು ಮಲ್ಲೇಶನಾಗಿ ದಯಮಾಡಿಸಿ ಮೆರೆದಿರುವನೆಂಬುದಕ್ಕೆ ಲೇಶ ಮಾತ್ರವೂ ಸಂಶಯವಿಲ್ಲ. ಆದ ಕಾರಣವೇ ಈ ಸನ್ನಿವೇಶದಲ್ಲಿಯೂ ಕಂಥೇಭಿಕ್ಷದ ಕಾಯಕವನ್ನು ಕೈಗೊಂಡರೆಂಬುದು ಭಾಸವಾಗುತ್ತದೆ.

ಕಂಥೆ ಭಿಕ್ಷದ ಕಾಯಕದಲ್ಲಿ ಪ್ರಸಾದದ ಮಹತ್ವ ಹೆಚ್ಚಿನದಿರುತ್ತದೆ. **“ ಬೆಳಗಪ್ಪ ಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ ಸುಪ್ರಭಾತದಲಿ ಜಂಗಮಕ್ಕೆ ನಮಸ್ಕರಿಸುವುದು ಕಣಾ ಕಾಯಗೊಂಡು ಹುಟ್ಟಿದ ಸದ್ಭಕ್ತನ ಭಕ್ತಿ ಭಾಗ್ಯದ ಕುರುಹು ”** ಎಂಬುದು ಭಕ್ತವತ್ಸಲನಾದ ಬಸವಣ್ಣನ ಭಾವ. ವೃಕ್ಷದ ಬಾಯಿ ಬುಡ–ಮೂಲದ

ಬೇರೆಂತೋ ಅಂತು; ಲಿಂಗದ ಬಾಯಿ ಜಂಗಮವೆಂಬುದನ್ನು ಮರೆಯದೆ ಪ್ರತಿಯೊಬ್ಬ ಲಿಂಗಾಂಗಿಯ ಮನೆಯಲ್ಲಿಯೂ ಜಂಗಮಕ್ಕೆ ನೀಡಿ ತೃಪ್ತಿಗೈಸಿ ಅನಂತರ ತಾವು ಸಲಿಸುವುದು ಶೃತಿಸಿದ್ಧ, ಶಿವನಿಗೆ ಮುದ್ದು, ಪುರಾತನರ ಮೆಚ್ಚು. ಹೀಗೆ ನಿಯಮವಿರುತ್ತಿರಲು ನಿತ್ಯವೂ ಭಕ್ತರು ತಮ್ಮ ನಿತ್ಯ ನೇಮಕ್ಕೆ ಅನುಗುಣವಾಗಿ ಜಂಗಮರನ್ನು ಹುಡುಕಿ ಕರೆತಂದು ವ್ರತನಿಯಮಗಳನ್ನು ತೀರಿಸಿ ತಮ್ಮ ವ್ಯವಹಾರಗಳನ್ನು ಮಾಡುವುದು ಕಷ್ಟಸಾಧ್ಯವಾದ ಕಾರಣ ಶ್ರೀ ಗುರುಮಲ್ಲೇಶ ಮಹಾತ್ಮರು ಉಭಯ ಸ್ಥಲದವರನ್ನೂ ಗೊತ್ತು ಗುರಿಯಾಗಿಟ್ಟುಕೊಂಡು ಪ್ರತ್ಯಕ್ಷ ಕಂಥೆಭಿಕ್ಷದ ಕಾಯಕವನ್ನು ಮಾಡಿ ತೋರಿಸಿದರು. ಇದರಿಂದ ಕಾಯಕವೂ ಸಿದ್ಧಿಸಿದಂತಾಯಿತು, ಭಕ್ತರ ನಿತ್ಯನೇಮವೂ ನಡೆದಂತಾಯಿತು. ಎಷ್ಟು ಸುಲಭಮಾರ್ಗ!

ಶ್ರೀ ನಿಜಗುಣಶಿವಯೋಗಿಗಳು ಹೇಳಿದಂತೆ "ಧರೆಯೊಳ್ಯಾಚನೆಗಿಂತ ಲಘುತರ ಮುಂಟೆ" ಎಂದು ಹೇಳಿರುವ ಹಾಗೆ ಆಶೆ ಆಮಿಷೆಗಳಿಂದ ತನಗೆ ತನ್ನ ಸತಿ-ಸುತರಿಗೆಂದು ಮಾಡಿದ್ದು ಪ್ರಸಾದವಾಗುವುದರ ಬದಲು ರಾಕ್ಷಸ ರೂಪಿನ ವಿಷವಾಗುತ್ತದೆ. ಹಾಗಲ್ಲದೆ ನಿರಾಶೆಯಿಂದ ನಿರ್ಮಲ ಮನಸ್ಸಿನವರಾಗಿ—

"ತ್ರಿಕರಣದಿ ಸುಪವಿತ್ರನಾಗಿಯೆ| ಅಕುಟಿಲದ ಸುಸ್ನಾನ
ಗೈಯ್ಯುತ|
ವಿಕಸಿತ ಹೃದಯಾಂಬುಜವ ಶಿವಪಾದಕರ್ಪಿಸುತ|
ಭಕುತಿಯಿಂದಷ್ಟಾವರಣಂಗಳ| ಸುಖವನನುಭವಿಸುವುದು
ನಿನ್ನಯ|
ಮುಕುತಿ ಕಾಯಕ ವೃತ್ತಿಯು .... .... ...."

ಘನ ಮನದಲ್ಲಿ ಮಾಡಿದ ಕಾಯಕದ ಪ್ರಸಾದ ಲೋಕವನ್ನೇ ರಕ್ಷಿಸುವ ಮಹಾ ಹಸಾದ ಸುಪ್ರಸಾದ ವಾಗುತ್ತದೆ "ನನಗೆಂದು ಮಾಡಿದರೆ ಶುನಿಜನ್ಮ ಸತ್ಯ, ನಿನಗೆಂದು ಮಾಡಿದಡೆ ಘನಲಿಂಗ ನಿತ್ಯ"

ಸದಾ ಗುರುಲಿಂಗ ಜಂಗಮಕ್ಕೆ ದಾಸೋಹ ಮಾಡುವ **ಮೂರ್ತಿ** ಹಾಗೂ ಕಂಥೆಭಿಕ್ಷದ ಕಾಯಕಾನುವರ್ತಿ—

" ಶಾಂತಿ ಸೈರಣೆ ಶಮೆದಮೆಯು ಕೃಪಾಂತಃಕರಣವು ಸದು
ವಿವೇಕವು |
ಸ್ವಾಂತದೊಳು ಭಯಭಕುತಿ ವಿಶ್ವಾಸಗಳು ತ್ರಿವಿಧದೊಳು |
ಸಂತತಂ ಸತ್ಕ್ರಿಯೆ ಸದಾಚಾರಾಂತು ನಡೆನುಡಿ ಏಕಮನ
ದೃಢ | ವಾಂತ...."

ಸೇವಾಧುರೀಣನಾಗಿ ಸದ್ಭಕ್ತರ ಮನೆಗೈದಿ " **ಹರ ಶಿವ ಶಿವಾ ಶಿವಗಣಂಗಳ ಪರಮ ಕಂಥೆಭಿಕ್ಷ** " ವೆಂದು ಆದರದಿ **ಬೇಡಿ** ತಂದೀವುದು ನಿರ್ವಂಚನೆಯ ದಾಸೋಹ. ಈ ಭಿಕ್ಷ ಹುಲುಸಾಗಿ ಫಲಿಸುತ್ತದೆ. ಕಾಯಕಕ್ಕೆ ನೀಡುವ ಸದ್ಭಕ್ತರೂ, ನಿರ್ಮಲಚಿತ್ತರಾಗಿ, ಭಯಭಕ್ತಿ ವಿಶ್ವಾಸದಿಂದ ಶಿವಧ್ಯಾನ ಪೂರ್ವಕವಾಗಿ ತಮ್ಮ ಮನೆಗಳಲ್ಲಿ ಸಿದ್ಧ ಮಾಡಿಟ್ಟಿರುವ ಪ್ರಸಾದವನ್ನು ಯಥಾಶಕ್ತಿ ನೀಡಿ ನಮಸ್ಕರಿಸಬೇಕು. ಪರಿಣಾಮಿಸುವವರೂ ಸುಚಿತ್ತ, ಸುಬುದ್ಧಿ, ಸುಮನ, ಸುಜ್ಞಾನ, ಸದ್ಭಾವಿಗಳಾದರೆ

" ಶಿವಯೋಗಿ ಸಂತೃಪ್ತೋ | ತೃಪ್ತೋ ಭವತಿ ಶಂಕರಃ
ತತೃಪ್ತ್ಯಾ ತನ್ಮಯಂ ವಿಶ್ವಂ | ತೃಪ್ತಿ ಮೇರೆ ಸಚರಾಚರಂ ||

ಇಂತೆಂದು ಶೃತಿ ಸಾರುವುದರಿಂದ ದೇಶವೇ ಸುಭಿಕ್ಷವಾಗಿ ಶಾಂತಿ ವಾತಾವರಣದಲ್ಲಿ ವರ್ತಿಸುತ್ತಾ ಶಾಶ್ವತ ಸುಖವೇ ಲಭಿಸುವುದಾಗುತ್ತದೆ. ಇಂತಹ ಪವಿತ್ರ ಪ್ರಸಾದ ದಾನದಲ್ಲಿ ಶ್ರೀ ಗುರುಮಲ್ಲೇಶ್ವರರು ನಿರತರಾಗಿದ್ದರು. ಒಮ್ಮೆ ಶ್ರೀ ಮುಪ್ಪಿನಸ್ವಾಮಿಗಳು, ಗುರುಮಲ್ಲಪ್ಪಾ ! ಏಕೆ ಇವರಿಗೆಲ್ಲಾ ಅನ್ನಕೊಡುವೆ ? ಪೂರ್ವಜನ್ಮದ ಪಾತಕಾಧಿಕ್ಯದಿಂದ ಕಡುಕಷ್ಟವನ್ನನುಭವಿಸಬೇಕಾದ ಪ್ರಯುಕ್ತ, ಅಂಗಹೀನ **ಮೊಂಡು**

ಮೂಕರೆಯರಾಗಿ ಸಂಜನಿಸಿರುವರು. ಇದು ಶಿವನಿಯಾಮಕ. ನಿನ್ನ ಹಸ್ತ ಪರುಷದಿಂದ ಈ ಪಾಪಾತ್ಮರಿಗೆ ಪ್ರಸಾದವಿತ್ತು ಪುನೀತರನ್ನಾಗಿ ಮಾಡುತ್ತಿರುವೆಯಲ್ಲಾ, ಶಿವಾಜ್ಞೆಗೆ ಪ್ರತಿಬಂಧಕ ಮಾಡಿದಂತೆ ಆಗುವುದಿಲ್ಲವೆ? ಅಲ್ಲದೆ ಗುರುಲಿಂಗಜಂಗಮ ನಿಂದಕರು ತಾನೇ ಈ ರೀತಿ ಬಂದಿರುವುದು? ಖಂಡಿತಾ ಕೊಡಬಾರದಪ್ಪ ಎನ್ನಲು, ಶ್ರೀ ಗುರುಮಲ್ಲಪ್ಪನವರು, ಸ್ತುತಿ ನಿಂದ್ಯಾದಿ ವಿರಹಿತರಾದ ನಿಮ್ಮ ಶರಣರಿಗೆ ಪತಿತ ಪಾವನರು, ಅನಾಥ ರಕ್ಷಕರು, ಆಪದ್ಬಾಂಧವರೆಂಬ ಬಿರುದಿರುವುದಿಲ್ಲವೆ? ಮುಪ್ಪಿನ ಗುರುವೆ, ಕೆಟ್ಟದ್ದನ್ನು ಒಳ್ಳೆಯದನ್ನಾಗಿ ಮಾಡುವುದು ತಾನೆ ಈ ಗುರುಮಲ್ಲಯ್ಯನ ಮುಂದಿನ ಕರ್ತವ್ಯವೆಂದು ಉತ್ತರಿಸಲು ಮುಪ್ಪಿನ ಸ್ವಾಮಿಯವರು ಸುಮ್ಮನಾದರು.

ಗುರುಮಲ್ಲೇಶ್ವರರು ಹೀಗೆ ದಿನೇ ದಿನೇ ದಾಸೋಹ ಮಾಡುತ್ತಾ ಭಿಕ್ಷಾನ್ನ ಮೋಕ್ಷ ಸಾಧನವೆಂಬುದನ್ನು ಸಾಕ್ಷಾತ್ಕರಿಸುತ್ತಾ, ತಮ್ಮ ಚಿತ್‌ಪ್ರಭೆಯ ಮಹಾಪ್ರಭಾವ ಶಕ್ತಿಯ ಆಕರ್ಷಣೆಯಿಂದ ಸತ್ಪುರುಷರ ಹೃದಯವನ್ನರಳಿಸುತ್ತಾ ಆನಂದ ಪರವಶರಾಗುತ್ತಿದ್ದರು.

ಶ್ರೀ ಗುರುಗಳು ಚಾಮುಂಡಿಬೆಟ್ಟದಲ್ಲಿದ್ದ ಒಂದು ಹಳೇ ಬಿಲ್ವ ವೃಕ್ಷದಡಿಯಲ್ಲಿ ತಮ್ಮ ಆತ್ಮ ಜ್ಯೋತಿಯನ್ನೇ ತಮ್ಮ ಅಂತರ್ದೃಷ್ಟಿಯಿಂದ ನೋಡುತ್ತಾ ಕುಳಿತಾಗ ಮನ್ಮಥ ದಹನ ವೇಳೆಯಲ್ಲಿ ತಾನೇ ತಾನಾಗಿ ಮೌನಗೊಂಡು ಕುಳಿತ ಫಣಿಭೂಷಣನಂತೆ, ನೋಡಿದವರಿಗೆ ದುರಿತ ಪಂಚಕವನ್ನರುಹಿ ಬಿಸುಡಲು ಬಂದ ಗುರುವಿನ ಗುರು ಪರಮ ಗುರುವೇ ಇವನಲ್ಲದೆ ಮತ್ತೊಬ್ಬನಿಲ್ಲೆಂಬ ಭಯಭಕ್ತಿ ಆವೇಶ ಬರುತ್ತಿತ್ತು ಕಂಡು ಕೇಳಿದ ಭಕ್ತರಿಗೆ.

ಈ ಅದ್ಭುತ ಶಕ್ತಿಯ, ದಿವ್ಯಕಳೆಯ ಸ್ವರೂಪವನ್ನು ಮೈಸೂರಿನ ಜನತೆ ಬಹಳ ಸಂತೋಷದಿಂದ ತಮ್ಮ ಮನೆಗೆ ಬಿನ್ನಹ ಮಾಡಿ ಕರೆದು ಕೊಂಡುಬರಬೇಕು, ನೋಡಬೇಕು, ಮಾತಾಡಬೇಕು, ಅವರ ವಚನಾ

ಮೃತವನ್ನು ಕೇಳಬೇಕು, ಅವರ ಆಶೀರ್ವಾದವನ್ನು ಪಡೆಯಬೇಕೆಂಬ ಕುತೂಹಲ ವೆಗ್ಗಳವಾಗುತ್ತಾ ಬಂತು. ಅರಸು ಮನೆತನದವರು, ಅಧಿಕಾರಿಗಳು, ವರ್ತಕರು ಅವರಿವರೆನ್ನದೆ ಎಷ್ಟೋ ಜನ ಅವರ ಶಿಷ್ಯರಾದರು. ಶ್ರೀಗಳವರು ಗರಡೀಮನೆಗೆ ಹೋಗಿ ಮಟ್ಟೇ ಸಾಧನೆ ಮಾಡುತ್ತಿದ್ದರು, ವ್ಯೆಮಸಗಳ ದುಡಿಮೆಯಿಂದ ಶಿವಯೋಗ ಸಾಮ್ರಾಜ್ಯದಲ್ಲಿ ತಲ್ಲೀನರಾಗುತ್ತಿದ್ದರು.

ಗುರುಗಳು, ಅರಮನೆಗೂ ಹೋಗಿ ಬರುತ್ತಿದ್ದರು. ಅಲ್ಲಿಗೂ ಕಂಥೆಭಿಕ್ಷಕ್ಕೆ ಹೋಗುತ್ತಿದ್ದರು. ಸಂಗೀತ ನೃತ್ಯ ಗೀತಾದಿಗಳಲ್ಲಿ ಭಾಗ ವಹಿಸುತ್ತಿದ್ದರು. ಪುರಾಣ ಪ್ರವಚನಗಳಿಗೆ ಭೇಟಿ ಕೊಡುತ್ತಿದ್ದರು. ಇದರಿಂದ ಅರಮನೆಯಲ್ಲಿನ ಗಣ್ಯರು, ಭಕ್ತಿಗಳು ಇತ್ಯಾದಿ ಮಂದಿಯು ಗುರುಗಳ ಪರಿಚಯ ಮಾಡಿಕೊಂಡಿದ್ದರು.



## ಅಧ್ಯಾಯ ೨

ಒಂದಾನೊಂದು ದಿನ ದೊರೆಯವರ ನೇತೃತ್ವದಲ್ಲಿ ಬಸವಪುರಾಣ ಪ್ರವಚನ ಜರುಗುತ್ತಿರಲು ಅಲ್ಲಿ ಕೇಳುವವರಲ್ಲಿ ಶ್ರೀ ಗುರುಮಲ್ಲಪ್ಪನವರೂ ಒಬ್ಬರಾಗಿದ್ದರು. ಅಲ್ಲದೆ ವಿದ್ವಾಂಸರೂ, ಪಂಡಿತರೂ ಮಂಡಿತರಾಗಿದ್ದರು. ಲೆಕ್ಕವಿಲ್ಲದಷ್ಟು ಜನಸಂದಣಿ ಇತ್ತು. ಅಂದಿನ ಪ್ರವಚನ ಶರಣ "ಒಡೆಹುಲ್ಲ ಬಂಕಯ್ಯ"ನ ಕಥೆ. ಒಡೆಹುಲ್ಲ ಬಂಕಯ್ಯನು ಅಷ್ಟವಿಧ ಷೋಡಶೋಪಚಾರದಿಂದ ತನ್ನ ನಿತ್ಯ ನೇಮದಂತೆ ಲಿಂಗಕ್ಕೆ ತನ್ನ ಶಿರಸ್ಸನ್ನೇ ಕತ್ತರಿಸಿ ಆರತಿ ಎತ್ತಿ ಮತ್ತೆ ಹತ್ತಿಸಿಕೊಂಡಿದ್ದಾನೆ. ಆಗ ಪುರಾಣ ಓದುತ್ತಿದ್ದವರು ನೋಡಿ ಹಿಂದೆ ಎಂಥಾ ಶರಣರು ಇದ್ದರು, ಹ್ಯಾಗೆ

ಮಾಡಿದ್ದಾರೆ ಈಗ ಅಂಥವರು ಯಾರು ಇದ್ದಾರೆ ಎಂದು ನುಡಿಯಲು, ಸಭೆಯಜನ "ಇಲ್ಲಾ ಇಲ್ಲಾ" ಎಂದು ಪ್ರತಿ ಉತ್ತರ ಸೂಚಿಸಲು ಈ ನಮ್ಮ ಕರ್ತೃ ಗುರುಮಲ್ಲೇಶನು ಎದ್ದುನಿಂತು ಏನಂದಿರಿ ಪುರಾಣಿಕರೆ? ಅಂದಿನವರಿಂದಿಲ್ಲವೆ? ಆಗಿನ ಸೂರ್ಯಚಂದ್ರರು ಇಂದು ಉದಯವಾಗುತ್ತಿಲ್ಲವೆ? ಆಗ ಆಗುತ್ತಿದ್ದ ಮಳೆ ಬೆಳೆಗಳು ಇಂದಾಗುತ್ತಿಲ್ಲವೆ? ಇಗೋ ನೋಡು ಅಂದಿನ ಶರಣ ಇಂದುಂಟೆಂಬುದ; ಎಂದಾಗಲೇ ಪಕ್ಕದಲ್ಲಿದ್ದ ಬಾಕುವನ್ನು ತೆಗೆದು ಉದರವನ್ನು ಬಗೆದು ಕರುಳನ್ನು ಕೊರಳಿಗೆ ಹಾಕಿ ಭೀಕರ ಸ್ವರೂಪವನ್ನು ತಾಳಿನಿಂತರು. ನೆರೆದಿದ್ದ ಸಭೆ ಎಲ್ಲಾ ತತ್ತರಿಸಿ ಜಜ್ಜರಂಬೋಗಿ, ಶರಣಾಗತರಾಗಿ, ಗುರುವೇ! ಮಹಾಪ್ರಭುವೆ! ಶಾಂತನಾಗು, ಪಾಮರರಾದ ನಮಗೆ ಸ್ವಾಮಿಯಾದ ನಿನ್ನ ಮಹತ್ವವೇನು ಗೊತ್ತು, ಕೃಪಾಪೂರನಾಗು ಮಹಾಸ್ವಾಮಿ!! ಎಂದು ಮೊರೆ ಇಟ್ಟು ನಡುಗಿಹೋದರು. ರಾಜರು ಶ್ರೀಗಳವರ ಪಾದದ ಮೇಲೆ ಬಿದ್ದು, ತಂದೆಯೇ ಅಜ್ಞರಾದ ನಮ್ಮನ್ನು ಕ್ಷಮಿಸಬೇಕು. ಸರ್ವಜ್ಞ ಸ್ವರೂಪರಾದ ನೀವು ಶಾಂತಮೂರ್ತಿಯಾಗಿ ನಮಗೆ ಪ್ರಸನ್ನರಾಗಬೇಕು. ಅಂದಿದ್ದ ಶರಣರೂ ನೀವೆ, ಇಂದಿರುವ ಶರಣರೂ ನೀವೆ, ಮುಂದೆ ಮೈದೋರಿ ಮೆರೆವ ಸುಂದರ ಶರಣರೂ ನೀವೆ, ಇಂದಿದನ್ನು ಸುಳ್ಳೆಂದವರು ಭವಭವದಲ್ಲಿಯೂ ಹಂದಿಯಾಗಿ ಸುಳಿಯುವುದು ಸಹಜಕ್ಕೆ ಸಹಜವೆ. ಇದು ಖಂಡಿತ. ಕೃಪಾಳು, ಇನ್ನು ನಾ ನಿನ್ನ ಆಳಿನ ಆಳು. ಎಂದು ಮತ್ತೆ ಮತ್ತೆ ನಮಸ್ಕರಿಸಿದರು.

ಕರುಣಾಸಿಂಧುವಾದ ಗುರುಮಲ್ಲಪ್ಪನವರು ಭಯಪಡಬೇಡ ಎಂದು ಅಭಯವಿತ್ತು ಮತ್ತೆ ಕರುಳನ್ನು ಉದರದಲ್ಲಿ ಅಡಗಿಸಿ ವಿಭೂತಿ ಸವರಿಕೊಂಡು ವಸ್ತ್ರದುಡಿಗೆಯನ್ನು ಉಟ್ಟು ನಿರುಪಾಧಿಕತೆಯಿಂದ ಹಸನ್ಮುಖರಾಗಿ, ಪುರಾಣಿಕರೆ, ಪಂಡಿತರೆ! ಎಚ್ಚರಿಕೆ! ಇನ್ನೆಂದೂ ಈ ಅಪಶಬ್ದವನ್ನು ಆಡಬಾರದು. ಶರಣರಿಗೆ ಮರಣವೆಂಬುದಿಲ್ಲ. "ಕಂಥೆ ಸಡಲಿದರಿನ್ನು ಬೇರೆ | ಕಂಥೆ ಧರಿಸಿಯೆ ಪೂಜೆಗೊಂಬೆವು" ಎಂದು ಹೇಳಿ ಪುರಾತನರು ನುಡಿದಿದ್ದಾರೆ. ಆದ್ದರಿಂದ ಆಗ ಬೇರೆ ಈಗ ಬೇರೆಂದು ಯಾವಾ

ಗಲೂ ಎರಡೆಣಿಸಬಾರದು, ತಿಳಿಯಿತೆ? ಎನ್ನಲು, "ಇಲ್ಲಾ, ಇಲ್ಲಾ" ಎಂದು ಸಭೆಯೇ ಮಣಿಯಿತು. ಮತ್ತೆ "ಜಯ ನಮಃ ಪಾರ್ವತೀ ಪತೇ ಹರ ಹರ ಮಹಾದೇವ, ಅಲಕ್ ನಿರಂಜನ ಗುರುಮಲ್ಲೇಶ ಮಹಾ ಪ್ರಭೋ" ಎಂದು ಜಯಘೋಷಮಾಡಿತು.

ಸಂತುಷ್ಟರಾದ ಮಹಾರಾಜರು ನಮಸ್ಕರಿಸಿ ಅರಮನೆಗೆ ದಯ ಮಾಡಿಸಬೇಕು ಪ್ರಭುವೆ ಎಂದು ಬಿನ್ನೈಸಿ ಕರೆದುಕೊಂಡು ಹೋದರು. ಅರಮನೆಯಲ್ಲಿ ರತ್ನಸಿಂಹಾಸನದ ಮೇಲೆ ಮೂರ್ತಗೈಸಿ ಬಂಗಾರದ ತಟ್ಟೆಯಲ್ಲಿ ಮುತ್ತುರತ್ನಗಳನ್ನು ತುಂಬಿ ಕಾಣಿಕೆಯಾಗಿ ಅರ್ಪಿಸಲು, ಇವೆಲ್ಲಾ ಯಾರ ಸೊತ್ತು ದೊರೆಗಳೆ? ಪ್ರಜೆಗಳ ಸೊತ್ತು. ಪ್ರಜೆಗಳಿಗೆ ಆಗ ಬೇಕಲ್ಲದೆ ನನಗೇಕೆ? ಇದನ್ನೆಲ್ಲಾ ತೆಗೆದುಕೊಂಡುಹೋಗಿ ನಾನೇನು ಮಾಡಲಿ? ಇದು ಶಿವಾರ್ಪಿತಕ್ಕೆ ಸಲ್ಲುತ್ತದೆಯೆ? ಒಲ್ಲೆ ಒಲ್ಲೆ ಎಂದು ತಿರಸ್ಕರಿಸಲು, ರಾಜರು ಮತ್ತೆ ಹೇಗೆ ಮಹಾಸ್ವಾಮಿ ನನ್ನ ಭಕ್ತಿ ತಮಗೆ ಅರ್ಪಿತವಾಗುವುದು? ತಮ್ಮ ಕೃಪೆ ನನಗೆಂತು ಸಾಧ್ಯ? ಅಪ್ಪಣೆ ಯಾಗಬೇಕೆಂದು ರಾಜರು ಬೆಸಗೊಳ್ಳಲು, ಸ್ವಾಮಿಯವರು, ನೋಡಿ ರಾಜ ವರ, ಯಾರೇ ಆಗಲಿ ತಮ್ಮ ತನುವನ್ನು ದಂಡಿಸಿ ಕಷ್ಟದಿಂದಾರ್ಜಿಸಿ ತಂದು ಕೊಟ್ಟದ್ದು ಮಾತ್ರ ಭಕ್ತಿಕಾಣಿಕೆಯಾಗಿ ಸಲ್ಲುತ್ತದೆ. ಇದೊಂದೂ ಈ ಗುರುಮಲ್ಲಯ್ಯನಿಗೆ ಸಲ್ಲದು, ಎಂದು ಹೇಳಿ ಹೊರಟರು. ರಾಜರಿಗೆ ಪರ ಮಾಶ್ಚರ್ಯವಾಯಿತು, ಮನಮುಗ್ಧರಾದರು. ಹೃದಯದಲ್ಲಿ ಕಿಂಕು ರ್ವಾಣ ಸದ್ಭಕ್ತಿಗಳು ಒಡಮೂಡಿದ ಅವರು, ಮಹಾಸ್ವಾಮಿಯನ್ನು ಯಾವರೀತಿ ಒಲಿಸಿಕೊಳ್ಳಲಿ ಎನ್ನುವ ವ್ಯಾಕುಲ ಬೆಂಬಿಡದಾಗಿ ಅದೇ ಚಿಂತೆಯಲ್ಲಿ ಹಂಬಲಿಸ ತೊಡಗಿದರು.

ಇತ್ತ ಪಟ್ಟಣದಲ್ಲೆಲ್ಲಾ ಕರುಳುಪವಾಡದ ಮಹಿಮೆಯು ಪ್ರಚಾರ ವಾಗಿ ಅಂದು ಪ್ರಖ್ಯಾತರಾಗಿದ್ದ ನಂಜರಾಜಬಹದ್ದೂರರವರು ಶ್ರೀ ಸ್ವಾಮಿಯ ಶಿಷ್ಯರಾದರು. ಅವರ ಮತ್ತೊಬ್ಬ ಆಪ್ತರಾದ ಶಿಷ್ಯರು ಎಂಬು ದಕ್ಕಿಂತಲೂ ಮಾತೆಯೆಂದು ಕರಸಿಕೊಳ್ಳುವ ಮಟ್ಟದಲ್ಲಿದ್ದವರು ಚಿಕ್ಕ

ಲಿಂಗಮ್ಮಯ್ಯ ನೆಂಬ ಭಕ್ತೆ. ಇವರು ಗುರುಗಳ ಪ್ರಿಯಭಕ್ತೆಯಾಗಿ ಪ್ರತಿದಿನ ಪ್ರಾತಃಕಾಲ ಮಹಾಸ್ವಾಮಿಯವರು ಪೊಸರನ್ನವನ್ನು ಅವರ ಮನೆಯಲ್ಲಿ ಸ್ವೀಕರಿಸಬೇಕೆಂದು ಬಿನ್ನೈಸಿಕೊಂಡು, ಅದರಂತೆಯೇ ಆಗಲಿ ಎಂದು ಒಪ್ಪಿ ನಡೆಸುತ್ತಿದ್ದರು.

ಗುರುಗಳು ಶ್ರೀ ಶಿವನ ಭಕ್ತಾಧೀನತೆಯನ್ನು ವ್ಯಕ್ತಪಡಿಸಲು ಪರಿಪಕ್ವ ಹೃದಯರಾದವರನ್ನೆಲ್ಲಾ ಪರೀಕ್ಷಿಸಿ ಉಪದೇಶಿಸುತ್ತಿದ್ದರು. ಗುರುಗಳು ಜಾತಿಮತವನ್ನು ಎಣಿಸಿದವರಲ್ಲ. ಇವರ ಶಿಷ್ಯರಲ್ಲಿ ಎಲ್ಲಾ ಪಂಗಡದವರೂ ಇದ್ದರು. ಮುಸಲ್ಮಾನರ ಹೆಂಗಸೊಬ್ಬಳು ಬಹಳ ಜ್ಞಾನ ನಿಷ್ಠೆಯಿಂದ ಗುರುಪಾದ ಧ್ಯಾನದಲ್ಲಿಯೇ ಮಗ್ನಳಾಗಿ ಅಸುನೀಗಿದಳು. ಮತ್ತೊಬ್ಬ ಮೌಲಾನಪೀರನೆಂಬುವನು ಸ್ವಾಮಿಯ ಶಿಷ್ಯ. ಇವನು ತನ್ನ ಮೃತಳಾದ ತಾಯಿಯನ್ನು ಕಂಡು "ಅಮ್ಮ ಉಣಬಡಿಸೇಳಮ್ಮ" ಎಂದು ಕೂಗಿದಾಕ್ಷಣವೇ ಆ ಅಮ್ಮನು "ಗುರುಮಲ್ಲಪ್ಪ" ಎನ್ನುತ್ತಾ ಮೇಲೆದ್ದು ಮಗನಿಗೆ ಉಣಬಡಿಸಿ ಮತ್ತೆ ಪ್ರಾಣಬಿಟ್ಟಳು. ಇವರ ಗೋರಿಗಳನ್ನು ಇಂದಿಗೂ ಮೈಸೂರಿನಲ್ಲಿ ಕಾಣಬಹುದು.

ಗುರುಗಳು ಮೈಸೂರಿನಲ್ಲಿದ್ದಾಗಲೇ ಕೊಡಗು ಪ್ರಾಂತ್ರದಲ್ಲಿ ಸಂಚಾರಮಾಡಿ ಅನೇಕ ಮಂದಿ ಶಿಷ್ಯರಿಗೆ ತತ್ವೋಪದೇಶ ಮಾಡಿದ್ದಾರೆ. ಅಲ್ಲಿ ಮೆರೆದಿರುವ ಪವಾಡಗಳು ಅಲ್ಲಲ್ಲಿ ಇಂದಿಗೂ ಜನಜನಿತವಾಗಿವೆ. ಅಪ್ಪಗಳಿಗೆ ಮೈಸೂರಿನಲ್ಲಿ ಸುಪ್ರೀತಿಯಿಂದ ಭಕ್ತರು ಎಷ್ಟೋ ಮನೆಗಳನ್ನು ದಾನವಾಗಿ ಕೊಟ್ಟಿದ್ದರು. ಗುರುಗಳು ಅವುಗಳನ್ನೆಲ್ಲಾ ಒಬ್ಬೊಬ್ಬ ಜಂಗಮರಿಗೆ ವಹಿಸಿಬಿಟ್ಟು ತಾವು ಅಲಕ್‌ನಿರಂಜನರಾಗಿದ್ದರು. ಉದಾಹರಣೆಗೆ ಚೌಕೀ ಮಠ, ಕೊಡಗಿನಮಠ, ಮಹಾಲಿಂಗಪ್ಪನವರ ಮಠ ಮುಂತಾದುವು.

ಮಹಿಮಾಮೂರ್ತಿ ಶ್ರೀ ಗುರುಮಲ್ಲೇಶನ ಕರುಳುಪವಾಡದ ಅದ್ಭುತವನ್ನಡಿಗಡಿಗೆ ನೆನೆಸಿಕೊಳ್ಳುತ್ತಾ ಭಕ್ತಿಯ ವಿಕಳಾವಸ್ಥೆಯಿಂದ

ಆಕಸ್ಮಿಕವಾಗಿ ತನ್ನ ಅಂತರ್ಯದಲ್ಲಿ ಹೊಳೆದ ದೃಢಸಂಕಲ್ಪ ಮಾನಸರಾಗಿ ಮುಮ್ಮಡಿಕೃಷ್ಣರಾಜ ಒಡೆಯರವರು ಒಂದಿನಿರುಳು ನಿಜರೂಪವನ್ನು ಮರೆ ಮಾಚಿಕೊಂಡು ಕಮ್ಮಾರನ ಹತ್ತಿರ ಕೈಕೂಲಿ ಮಾಡಿ ಬಂದ ಒಂದು ಹಾಗವನ್ನು ತಂದು " ಹೊಲೆ ಹೊಲೆಯರ ಮನೆಯ ಹೊಕ್ಕಾದರೂ ಸಲೆ ಕೈಕೂಲಿಯ ಮಾಡಿಯಾದರೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನ ಒಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲ ಸಂಗಮದೇವ " ಎಂಬ ಬಸವಣ್ಣನವರ ವಚನದಂತೆ ಮಹಾಸ್ವಾಮಿಗೆ ಅರ್ಪಿಸಿ ನಮಸ್ಕರಿಸಿ ನಿಲ್ಲಲು, ಗುರುಸಾರ್ವಭೌಮನು, ಪರಮಾನಂದದಿಂದ ನೇತ್ರದ್ವಯಗಳಿಗೆ ಒತ್ತಿಕೊಂಡು, ಮಹಾರಾಜರವರೆ! ಇದು, ಶಿವಾರ್ಪಿತಕ್ಕೆ ಸಲ್ಲುವ ಸೊತ್ತು! ಈ ಗುರುಮಲ್ಲಯ್ಯನ ಅಚ್ಚುಮೆಚ್ಚು! ಎಂದು ಸಂತೋಷ ಪಟ್ಟರು. ಮತ್ತೆ ಸ್ವಾಮಿಯವರನ್ನು ದೊರೆಗಳು ಅರಮನೆಗೆ ಬಿಜಯಂ ಗೈಸಿಕೊಂಡು ಬ್ರಹ್ಮೋಪದೇಶವನ್ನು ಪಡೆದು ಪ್ರಾರ್ಥಿಸಿ ಅಪ್ಪಣೆ ತೆಗೆದುಕೊಂಡು ಪಾಗು, ಅಂಗಿ, ಷರಾಯಿ, ಪಾದಪೆಂಡೆ, ತೋಳಭಾಪುರಿ, ಕರ್ಣಕುಂಡಲ, ಹತ್ತು ಬೆರಳುಗಳಿಗೂ ಬಂಗಾರದ ಉಂಗುರಗಳು ಇವಿಷ್ಟಕ್ಕೂ 'ಮುಮ್ಮಡಿ ಕೃಷ್ಣಭೂಪ' ಎಂದು ವಿಳಾಸ ಕೆತ್ತಿಸಿ ಅಕ್ಕರೆ ಯಿಂದ ಉಡತೊಡಲು ಕೊಟ್ಟಿದ್ದಾರೆ. ಇವೆಲ್ಲವೂ ಈಗ ಹಾಲಿ ಮಠದಲ್ಲೇ ಇವೆ. ಮಹಾಸ್ವಾಮಿಯವರು ಪ್ರತಿವರ್ಷವೂ ಗೌರೀ ಹಬ್ಬದಂದು ತೊಟ್ಟುಕೊಂಡು ಭಿಕ್ಷೆ ಮಾಡುತ್ತಿದ್ದರಂತೆ. ಅಂದಿನಿಂದ ಯಾವಾಗಲೂ ಕೃಷ್ಣಭೂಪರು ಶ್ರೀ ಗುರುಪಾದ ಸ್ಮರಣೆಯಲ್ಲಿರುತ್ತಿದ್ದರು.



## ಅಧ್ಯಾಯ ೩

ಮೈಸೂರಿಗೆ ಅಗ್ನಿದಿಕ್ಕಿಗೆ ಸುಮಾರು ಎರಡು ಯೋಜನ ಪ್ರಮಾಣ ದಲ್ಲಿ ವಿಪುಲ ವೀರಶೈವ ಜನಸಂಖ್ಯೆಯನ್ನುಳ್ಳ ದೇವನೂರೆಂಬ ಗ್ರಾಮ.

ಇಲ್ಲಿ ಪಟೇಲ್ ಸುಬ್ಬೇಗೌಡರು ಗಣ್ಯವಕ್ತಿಗಳು. ಇವರ ಪತ್ನಿ ಶ್ರೀಮತಿ ಶಂಕರಮ್ಮ ಎಂಬುವರು. ಇವರಿಗೆ ಹಿಂದಿನ ಪಾಪಶೇಷದಿಂದಲೋ ಅಥವಾ ನಮ್ಮೆಲ್ಲರ ಪುಣ್ಯವಿಶೇಷದಿಂದಲೋ ಒಂದು ಬ್ರಹ್ಮಪಿಶಾಚಿ ಗ್ರಹವಿಡಿದು ಬಾಧಿಸುತ್ತಾ ಎಷ್ಟೋಜನ ಯಾಂತ್ರಿಕ ಮಾಂತ್ರಿಕರನ್ನೆಲ್ಲಾ ನುಂಗಿಬಿಟ್ಟದ್ದಿತು. ಪಟೇಲ್ ಸುಬ್ಬೇಗೌಡರು ಇದಕ್ಕಾಗಿ ತಮ್ಮ ಶಕ್ತಿ ಮೀರಿ ಹಣವೆಚ್ಚಮಾಡಿಕೊಂಡು ಬೇಸತ್ತು ಸಾಕಾಗಿ, ಇನ್ನಿದನ್ನೆಲ್ಲಾ ನೋಡಿಕೊಂಡು ಜೀವಿಸಿರುವುದಕ್ಕಿಂತಲೂ ಸಾಯುವುದು ಮೇಲೆಂದು ತೀರ್ಮಾನಿಸಿಬಿಟ್ಟದ್ದರು. ಅಷ್ಟರಲ್ಲಿಯೇ ದೇವನೂರಿಗೆ ದೇವಾಧಿದೇವನ ದಯಾಗಮನವಾಗಬೇಕಾದ ಸುಯೋಗ ಸಮೀಪಿಸಿತೋ ಏನೋ, ಆ ಬ್ರಹ್ಮಪಿಶಾಚವೇ ಸುಬ್ಬೇಗೌಡರನ್ನು ಕರೆದು, ನಾನು ಈ ಲೋಕದ ಯಾವ ಯಂತ್ರ ಮಂತ್ರೌಷಧಗಳಿಗೂ ತಗ್ಗಿ ಬಗ್ಗುವುದಿಲ್ಲ ಗೌಡರೆ! ಈ ನಿನ್ನ ಹೆಂಡತಿಯನ್ನು ಇದುವರೆಗೆ ಪೀಡಿಸಿದ್ದೇ ಸಾಕು. ನಿನಗೊಂದು ಉಪಾಯವನ್ನು ಹೇಳುತ್ತೇನೆ ಕೇಳು, ಯಾಕೆ ತಾನೆ ನೀನು ಅವರು ಇವರು ಎಂದು ಬಳಲಬೇಕು, ಮೈಸೂರಿನಲ್ಲಿ ಗುರುಮಲ್ಲಪ್ಪನೆಂಬುವರೊಬ್ಬರಿದ್ದಾರೆ. ನೀನೀಗ ಹೋಗಿ ಅವರನ್ನು ಕರೆದುಕೊಂಡು ಬಾ. ಆನಂತರ ಎಲ್ಲವೂ ಒಳ್ಳೆಯದಾಗುತ್ತದೆ ಎನ್ನಲು, ಇದು ನಿಜವೆ ಎಂದು ಸುಬ್ಬೇಗೌಡರು ಕೇಳಲು, ಪಿಶಾಚವು "ನಿಜ, ನಿಜ," ಎಂದಿತು. ಮತ್ತೆ ಸುಬ್ಬಣ್ಣನವರು ಈ ಮಾತನ್ನು ನಂಬಲೇ ಎನ್ನಲು "ನಂಬು" ಎಂದು ಗ್ರಹವು ನಂಬಿಗೆ ಕೊಟ್ಟಿತು. ಗೌಡರು ಹಾಗಾದರೆ ಹೋಗುತ್ತೇನೆ ಎನ್ನಲು, "ಹೋಗು" ಎನ್ನುವ ಗ್ರಹದ ಭಾಷೆಯನ್ನು ತೆಗೆದುಕೊಂಡು ಗೌಡರು, ಎಲ್ಲಾ ಕಟ್ಟಾಟದ ಶಕ್ತಿಯೂ ಮುಗಿಯಿತು ಇನ್ನು ಈ ಗುರುಮಲ್ಲಪ್ಪನೆಂಬುವರನ್ನು ಈ ಸಾರಿಯಮಟ್ಟಿಗೆ ಕರೆತಂದು ನೋಡಿಬಿಡುತ್ತೇನೆ ಎಂದು ಮೈಸೂರತ್ತ ಪ್ರಯಾಣ ಮಾಡಿದರು.

ಮೈಸೂರಿಗೆ ಯಾರನ್ನು ಹುಡುಕಿ ಕರೆತರಲು ಬಂದರೋ ಅವರೇ ಎದುರಿನಲ್ಲಿ ಪ್ರತ್ಯಕ್ಷ ಕಾಣಿಸಿಕೊಂಡು ಬರುತ್ತಿರಲು, ಗೌಡರು ಅವರನ್ನು ಕಂಡು ಯಾರು ಬುದ್ದೀ ತಾವು? ಎಂದು ಕೇಳಿದರು. ಅದಕ್ಕೆ ಪ್ರಶ್ನಿಸಿದ

ವರ ಇಂಗಿತವರಿತಿದ್ದ ಮಾಯಕಾರನು ಯಾಕಪ್ಪಾ ? ಏನು ? ಎನ್ನಲು, ಇಲ್ಲಿ ಯಾರೋ ಗುರುಮಲ್ಲಪ್ಪನವರು ಅಂತ ಒಬ್ಬರು ಇದ್ದಾರೆಯಂತೆ ನೀವೇನಾದರೂ ಕಂಡಿದ್ದೀರಾ? ನಾನವರನ್ನು ನೋಡಬೇಕಾಗಿತ್ತು-ಎಂದು ನುಡಿಯಲು, ಯಾರೋ ಅಪ್ಪ ಊರೊಳಗೆ ಇರಬಹುದೇನೋ ನೋಡು ಹೋಗು ಎಂದು ಹೇಳಿ ಹೋದಂತೆ ಹೋದರು.

ಸುಬ್ಬಣ್ಣನವರು ಆತುರದಿಂದ ನಡೆದು ಹೋಗುತ್ತಾ, ಎಲ್ಲಿದ್ದಾನೆಯೋ ಮಹಾತ್ಮ, ನಾನೆಷ್ಟು ಹೊತ್ತಿಗೆ ಅವರನ್ನು ಕಾಣುತ್ತೇನೋ ಎಂಬ ಹಂಬಲದಿಂದ ಕಂಡ ಕಂಡವರನ್ನೆಲ್ಲಾ ಕೇಳಿಕೊಳ್ಳುತ್ತಾ, ಕೇರಿ ಕೇರಿಗಳನ್ನೆಲ್ಲಾ ಹುಡುಕಿದರೂ ಕಣ್ಣಿಗೆ ಗೋಚರಿಸದೆ, ಯಾರನ್ನು ಕೇಳಿದರೂ ಇಲ್ಲಿದ್ದರು, ಅಲ್ಲಿದ್ದರು, ಇದೇ ತಾನೇ ನೋಡಿದ್ದೋ ಮಟ್ಟೇ ಮನೆ ಕಡೆ ಹೋದ್ರು, ಚಾಮುಂಡಿಬೆಟ್ಟದ ಕಡೆ ಹೋದ್ರು, ಎನ್ನುವವರೇ ಹೊರತು ಯಾರೂ ನಿರ್ದಿಷ್ಟವಾಗಿ ತೋರಲು ಸಾಧ್ಯವಾಗಲಿಲ್ಲ. ಹೀಗೆಯೇ ಎಷ್ಟೋದಿನ ಹುಡುಕಿ ಬಳಲಿ ಬೆಂಡಾಗಿಬಿಟ್ಟರು ಸುಬ್ಬೇಗೌಡರು. ಕೊನೆಗೆ ಗುರುಮಲ್ಲಪ್ಪನವರ ನಿಜಸ್ಥಿತಿಯನ್ನು ಅರಿತ ಯಾರೋ ಒಬ್ಬರು ಏನಪ್ಪಾ ನೀವು ಎಷ್ಟುದಿನ ಹುಡುಕಿದರೂ ಗುರುಮಲ್ಲಪ್ಪನವರನ್ನು ಕಾಣಲಾರಿರಿ; ಅಗೋ ಅಲ್ಲಿ ಕಾಣುತ್ತಾ ಇದೆಯಲ್ಲ ಆ ಮನೆಗೆ ಹೋಗಿ. ಚಿಕ್ಕಲಿಂಗಮ್ಮ ಅಂತ ಒಬ್ಬರಿದ್ದಾರೆ. ಅವರನ್ನು, ವಿಚಾರಿಸಿ, ನಿಮ್ಮ ಪರಿಸ್ಥಿತಿಯನ್ನೂ ಅವರಲ್ಲಿ ಹೇಳಿಕೊಳ್ಳಿ, ನಿಮ್ಮ ಪ್ರಯತ್ನ ಈಡೇರುತ್ತದೆ ಎಂದು ಸೂಚಿಸಿದರು.

ಅದರಂತೆ ಸುಬ್ಬಣ್ಣನವರು ಆ ಮನೆಗೆ ಹೋಗಿ, ತಾಯಿ ಚಿಕ್ಕಲಿಂಗವ್ವಾ, ನಮಸ್ಕಾರ ಕಣವ್ವಾ! ಎನ್ನಲು, ಯಾರಪ್ಪ? ಏನು ಬಂದಿರಿ? ಬನ್ನಿ ಎಂದು ಚಿಕ್ಕಲಿಂಗವ್ವನು ಹೇಳಲು, ನಾನು ನಂಜನಗೂಡು ತಾಲ್ಲೋಕು ದೇವನೂರು ತಾಯಿ. ಅಲ್ಲಿಯ ಪಟೇಲ್ ಸುಬ್ಬೇಗೌಡ ಎಂದು ನನ್ನ ಹೆಸರು. ಏನೇನೋ ಅವ್ಯವಸ್ಥೆಯಾಗಿ ಬಂದಿದ್ದೀನಿ ಕಣವ್ವ. ದಯವಿಟ್ಟು ನನಗೊಂದು ಉಪಕಾರಮಾಡಬೇಕು. ನಿಮ್ಮಿಂದ

ಗುರುಮಲ್ಲಪ್ಪನವರ ದರ್ಶನ ಭಾಗ್ಯ ಆಗಬೇಕು ನನಗೆ-ಎಂದು ತಮ್ಮ ಕಷ್ಟವನ್ನೆಲ್ಲಾ ಹೇಳಿಕೊಂಡರು. ಇವರ ದೈನ್ಯೋಕ್ತಿಗೆ ಮರುಕಗೊಂಡ ಚಿಕ್ಕಲಿಂಗಮ್ಮನು ಆಗಲಿ ಇರ್ರಪ್ಪಾ, ಮೊದಲು ಊಟಮಾಡ ಬನ್ನಿ ಎಂದು ಆಶ್ರಯ ಕೊಟ್ಟು ಸತ್ಕರಿಸಿದರು.

ಮರುದಿನ ಬೆಳಗ್ಗೆ ಶ್ರೀ ಗುರುಮಲ್ಲ ಮಹಾಸ್ವಾಮಿಯು ಎಂದಿನಂತೆ ನಿತ್ಯಕಟ್ಟಳೆಯ ಭಿಕ್ಷಹಕ್ಕೆ ಚಿಕ್ಕಲಿಂಗಮ್ಮಯ್ಯನ ಮನೆಗೆ, ಪ್ರವೇಶಿಸುತ್ತಾ ಮುಗುಳ್ನಗೆಯಿಂದ, ಏನಮ್ಮಾ ಚಿಕ್ಕಲಿಂಗಮ್ಮ! ನಿನ್ನ ಮನೆ ಮೊಸರನ್ನದ ಭಿಕ್ಷಹ ಈ ಹೊತ್ತಿಗೆ ಸರಿ ಅನ್ನುವಹಾಗಿದೆ ಎಂದರು. ಒಳಗಿದ್ದ ಚಿಕ್ಕಲಿಂಗಮ್ಮನು ಸ್ವಾಮಿಯ ಈ ನುಡಿಯನ್ನು ಕೇಳಿದಾಕ್ಷಣವೇ ಗಾಬರಿಯಾಗಿ ಓಡಿಬಂದು ಪಾದಗಳ ಮೇಲೆ ಬಿದ್ದು ಕಣ್ಣೀರ್ಗರೆದು ಗುರುವೇ, ಇದೇನು ಇಂದು ಹೀಗೆ ಹೇಳುತ್ತಿದ್ದೀರಿ! ನನ್ನ ಅಪರಾಧವೇನು? ಎಂದು ಬೆಚ್ಚಿ ಬೆರಗಾಗಲು, ಸ್ವಾಮಿಯು ಹ್ಹಾ! ಹಾಗಲ್ಲ, ಗಾಬರಿ ಪಡಬೇಡ, ನನ್ನನ್ನು ಕೇಳಿಕೊಂಡು ಯಾರು ಬಂದಿದ್ದಾರೆ ಹೇಳು-ಎಂದರು. ಯಾರೋ ದೇವನೂರಿನವರಂತೆ ಸುಬ್ಬಣ್ಣ ಅಂತೆ, ಹೆಂಡ್ತೀಗೆ ಬ್ರಹ್ಮಪಿಶಾಚಿಯೇನೋ ಹಿಡಿದು ಎಲ್ಲೆಲ್ಲಿಯವರೋ ಬಂದು ಏನುಮಾಡಿದರೂ ಬಿಡದೆ ಕಾಡುತ್ತಾಇದ್ದು ಕೊನೆಗೆ ನಿಮ್ಮ ಸಂದರ್ಶನವನ್ನು ಬಯಸಿ ಕರೆತರಲು ಹೇಳಿ ಕಳುಹಿಸಿದೆಯಂತೆ. ಮನದೊಡೆಯನಾದ ನೀನು ಲೋಕೋದ್ಧಾರ ಮಾಡಲು ಬಂದಿದ್ದೀಯೇ, ಮಾಯಕಾರ! ಈತ ಸತ್ತು ಸುಣ್ಣವಾಗಿ ಹೋಗಿದ್ದಾನೆ. ದಯಾಮಯನಾಗು ಸ್ವಾಮಿ ಎಂದು ಮುಗಿದ ಕರಯುಗ್ಮದಿಂದ ಬಿನ್ನೈಸಲು, ಸುಬ್ಬಣ್ಣನವರು ಬಹಳ ಭಯದಿಂದ ಕಿಂಕುರ್ವಾಣರಾಗಿ, ನಾನು ಮೈಸೂರನ್ನು ಪ್ರವೇಶಿಸುವ ಮುನ್ನವೇ ಪ್ರತ್ಯಕ್ಷ ಎದುರಿಗೆ ಕಾಣಿಸಿಕೊಂಡು ಗೊತ್ತುಕೊಡದೆ ನೀವು ಇದೂವರೆವಿಗೂ ಕಾಡಿದಿರಲ್ಲಾ ಮಹಾಪ್ರಭು! ಎಂದು ಕರಪುಟಾಂಜಲಿ ಬದ್ಧರಾಗಿ ದಿಂಡುಗೆಡೆದು ಬಿದ್ದು ಸ್ವಾಮಿಯ ಪಾದಾರವಿಂದಗಳನ್ನು ಹಿಡಿದು ಕಂಗಳ ಅಶ್ರುಜಲದಿಂದ ತೋಯಿಸಿಬಿಟ್ಟರು. ಕೃಪಾಂತಃಕರಣರಾದ ಶ್ರೀ ಗುರು ತಾನೇ ಅಭಯ ಕೊಟ್ಟು, ಬರಲೇಬೇಕೇನೋ ಪಾರುಪತ್ತೇಗಾರ? ಎಂದು ನಕ್ಕು,

ಊಟಕ್ಕಿಡು ನಡಿಯಮ್ಮ ಎಂದು ಪ್ರಸಾದ ಗೃಹಮಂ ಪೊಕ್ಕು ಕುಳಿತು ಲೀಲೆಯಿಂದ ಮೊಸರು ಅನ್ನವನ್ನು ಊಟ ಮಾಡಿ, ಇನ್ನೇನು ಬರಲೇ ನಮ್ಮಾ ಎಂದೆದ್ದು ನಿಲ್ಲಲು, ಚಿಕ್ಕಲಿಂಗಮ್ಮನು ನನ್ನಯ್ಯ ಎತ್ತಹೋದರೂ "ಈ ನಿನ್ನ ತೊತ್ತಿನ ಮೇಲೆ ದಯೆಯಿರಲಿ" ಎಂದು ನಮಸ್ಕರಿಸಲು, ಚಿಂತಾಂತಕ ಶ್ರೀ ಗುರುವು ನಿಶ್ಚಿಂತಳಾಗಿರು ಚಿಕ್ಕಲಿಂಗಮ್ಮ! ಅಲ್ಲೇನು ಇಲ್ಲೇನು "ಎಲ್ಲಿದ್ದರೂ ನೆನೆದವರ ಮನದಲ್ಲೇ ಅಲ್ವೇನಮ್ಮಾ ಈ ಗುರು ಮಲ್ಲಯ್ಯ. ಎಚ್ಚರಿಕೆ! ಮಣೇಗಾರ ಹೋಗೋಣ ನಡಿ" ಎಂದು ಹೊರಟರು.



## ಅಧ್ಯಾಯ ೪

ದೇವ ದೇವರಿಗೆಲ್ಲಾ ಗುರುದೇವ ಸಾರ್ವಭೌಮನಾದ ಶ್ರೀ ಗುರು ಮಲ್ಲದೇವನು ದಯಮಾಡಬೇಕಾಗಿದ್ದ ಕಾರಣವೇ 'ದೇವನೂರು' ಎಂಬ ನಾಮಾಂಕಿತವನ್ನು ತಳೆದಿದ್ದಿತೋ ಏನೋ ಎಂಬಂತೆ ಶೋಭಾಯಮಾನ ವಾಗಿದ್ದ ಈ ಗ್ರಾಮದೊತ್ತಿಗೆ ಶ್ರೀ ಗುರುಸ್ವಾಮಿಯು ಚಿತ್ತೈಸಿದಾಗಲೇ ಪೂರ್ವಾದ್ರಿಗೆ ಬಾಲಸೂರ್ಯನು ಉದಯವಾದಂತೆ ಆಯಿತು. ಜನತೆಯ ಮನಸ್ಸಿನಲ್ಲಿ ಹರ್ಷವುಕ್ಕೇರಿತು, ದುರಿತ ಪರಿದೋಡಿತು. ಪುರಪ್ರವೇಶ ಮಾಡಿದಾಗಲೇ ಪರಮ ಪುರುಷಾರ್ಥ ಕೈಗೂಡಿತು. ಪಟೇಲ್ ಸುಬ್ಬಣ್ಣ ನವರ ನಿಲಯಕ್ಕೆ ಬಂದು ಸುಂದರ ಶ್ರೀ ಗುರುಮಲ್ಲೇಶನು ಮಂಡಿಸಲು ಮನೆಯವರೆಲ್ಲಾ ನಮಸ್ಕರಿಸಿದರು. ಅಪರೂಪ ಮೂರ್ತಿಯಾಗಿ ಬಂದ ಸುಪರಾತ್ಪರನನ್ನು ನೋಡಲು ವಂದಿಸಲು ವಿಪರೀತ ಜನಸಂದಣಿ ಬಂದು ಬಂದು ವಂದಿಸುತ್ತಿದ್ದಿತು. ಪೈಶಾಚಗ್ರಸ್ತ ಶಂಕರಮ್ಮಯ್ಯನನ್ನು ಹಿಡಿದುತಂದು ಶ್ರೀ ಸ್ವಾಮಿಯ ಪಾದಗಳ ಮೇಲೆ ಕೆಡಹಲು ಆಗಲೇ ಆ ಬ್ರಹ್ಮಪಿಶಾಚಿಯು ಹರನ ಕರಶೂಲಾಗ್ರದಲ್ಲಿ ಸಿಕ್ಕು ಚಿರಸುಖಪಡೆದ ಅಂಧಕಾಸುರ ಮತ್ತು ವಿಶ್ವಕ್ಸೇನರ ಪರಿಯಂತೆ, ಗಹಗಹಿಸಿ ನಕ್ಕು

ಸಂತೋಷ ವೇರೆದಪ್ಪಿ, ಶರಣು, ಶರಣಾರ್ಥಿ! ಶ್ರೀ ಗುರುಮೂರ್ತಿ!! ನಿನ್ನ ಪಾದವೇ ಗತಿ, ತಂದೆ, ನಿನ್ನ ಸಂದರ್ಶನವೆನಗಿಂದು ಲಭಿಸಿತು, ಕರುಣಿಸು, ನನ್ನೀ ಕೀಳುಜನ್ಮವನ್ನು ಬಹುಬೇಗ ತೊಲಗಿಸು, ನಾನಿದಕ್ಕಾಗಿಯೇ ಈವರೆವಿಗೆ ಕಾದುಕೊಂಡು ಇದ್ದುದಾಯಿತು, ಬೇಗ ಬೇಗನೆ ಮೋಕ್ಷವನ್ನು ಪರಿಪಾಲಿಸು ದೇವ, ಎಂದು ದೈನ್ಯಭಾವದಿಂದ ಬೇಡಿಕೊಂಡಿತು. ಶ್ರೀ ಗುರುಗಳ ಪವಿತ್ರ ಪಾದಗಳ ಮೇಲೆ ಹೊರಳಾಡತೊಡಗಿತು. ಅಭಯಹಸ್ತನು ಭಯಬೇಡೆಂದು ಮನ್ನಿಸಿ ಆಶೀರ್ವಚನವನ್ನಿತ್ತನು. ನೆರೆದಿದ್ದವರೆಲ್ಲಾ ಆಶ್ಚರ್ಯಚಕಿತರಾಗಿ, ನಮ್ಮೀ ಗ್ರಾಮಕ್ಕೆ ಇಂತಹ ಸ್ವಾಮಿಯು ದಯಮಾಡಿವರಲ್ಲಾ ನಾವೇ ಧನ್ಯರೆಂದು ಕೊಂಡಾಡಿದರು.

ದೇವನೂರಿನ ಪ್ರತಿಯೊಂದು ಮನೆಯಲ್ಲೂ ಶ್ರೀಮತಿ ಶಂಕರಮ್ಮನ ಮೈಮೇಲಿದ್ದ ಬ್ರಹ್ಮಪಿಶಾಚಿಯು ನೂತನ ಸ್ವಾಮಿಯ ಪಾದಾರವಿಂದಗಳನ್ನು ಶರಣ್ಬೊಕ್ಕು ಬೇಡಿಕೊಂಡ ಅದ್ಭುತ ಪ್ರಸಂಗವನ್ನು ಕೇಳಿಕೇಳಿ ಹಿಗ್ಗುತ್ತಾ ಒಬ್ಬರಿಗೊಬ್ಬರು ಸಂತೋಷ ಸುಖದ ಸುಗ್ಗಿಯಲ್ಲಿ ಓಲಾಡುತ್ತಾ, ನಮ್ಮ ಈ ಊರಿನ ಸುಕೃತದ ಫಲವೇ ಶ್ರೀ ಗುರುಸ್ವಾಮಿಯ ಆಗಮನವೆನ್ನುತ್ತಾ, ನಾವೆಲ್ಲರೂ ಧನ್ಯರೆಂದು ಬಹಳ ಸ್ಫೂರ್ತಿಯಿಂದ ಅಡಿಗಡಿಗೂ ಆಶ್ಚರ್ಯಭರಿತರಾಗುತ್ತಿದ್ದರು. ಅಂದಿನ ದಿನವೇ ಕಲಶ ಸ್ಥಾಪನಾಪೂರ್ವಕ ಮೊದಲು ಬ್ರಹ್ಮಪಿಶಾಚಿಗೆ ಅನುಗ್ರಹವಿತ್ತು ಬೇರ್ಪಡಿಸಿ, ಅನಂತರ ಶಂಕರಮ್ಮಯ್ಯ ಮತ್ತು ಪಟೇಲ್ ಸುಬ್ಬಣ್ಣನವರು ಆದಿಯಾಗಿ ಇನ್ನೂ ಅನೇಕರಿಗೆ ಉಪದೇಶಿಸಿದರು. ಶಂಕರಮ್ಮನಿಂದ ಬಿಡುಗಡೆ ಹೊಂದಿದ ಬ್ರಹ್ಮಪಿಶಾಚವು ಭೂತಜನ್ಮ ವಿಮೋಚನೆಯಾಗಿ ಸದ್ಗತಿ ಪಡೆಯಿತು. ಶಂಕರಮ್ಮನವರು ಆರೋಗ್ಯಶೀಲರಾಗಿ ಶ್ರೀ ಗುರುಮಲ್ಲೇಶ ಪಾದಾರವಿಂದ ಮಕರಂದವನ್ನು ಸದಾ ಪಾನ ಮಾಡುವ ಭೃಂಗವಾಗಿರುತ್ತಾ ಮಹಾ ಪತಿಭಕ್ತಿ ಸಂಪನ್ನೆಯಾಗಿ ಗುರುಲಿಂಗಜಂಗಮ ಸೇವಾರಾಧನಾ ತತ್ಪರರಾಗಿರುತ್ತಿದ್ದರು.





ಶ್ರೀ ಗುರುಮಲ್ಲೇಶ್ವರರು ವಾಸಿಸುತ್ತಿದ್ದ " ಹಳೆ ಮಠ "



ಹಳೆ ಮಠದಲ್ಲಿರುವ ಶ್ರೀ ಗುರುಮಲ್ಲೇಶ್ವರರ " ಮಂಚ "



ಶ್ರೀ ಗುರುಮಲ್ಲೇಶ್ವರರ " ಸ್ನಾನದ ಕಡಾಯಿ."

## ಅಧ್ಯಾಯ ೫

ಗುರುಸಾರ್ವಭೌಮ, ಶ್ರೀಗುರುಮಲ್ಲೇಶ ಮಹಾತ್ಮರು ಸ್ವಲೀಲಾ ವಿನೋದದಿಂದಿರುತ್ತಾ ಲಿಂಗಪೂಜಾಧುರಂಧರರಾಗಿ ಜಂಗಮವೇ ಅಂಗಜಾರಿಯ ಶಿಖಾಚಕ್ರಸ್ಥ, ಚಿಜ್ಜ್ಯೋತಿ, ಮಂಗಳಾಕರ, ನಿರಂಜನ, ನಿರಾಭಾರಿದೇಶಿಕನೆಂಬುದಂ ಜನತೆಗೆ ಬೀರುತ್ತಾ, ಅಣುಮಾದ್ಯಷ್ಟಸಿದ್ಧಿಗಳೂ ತೃಣಸಮಾನವೆಂಬ ಭಾವವಂ ಭಕ್ತರ ಮನಕ್ಕೆ ತುಂಬುತ್ತಾ, ಚತುರ್ವಿಧಫಲ ಪದವಿಗಳಂ ಅರುಚಿ ಎಂದೆನಿಸಿ ಶಿವಾನುಭವ ಪ್ರಸಂಗದಿಂ ಸಂತೃಪ್ತಿಗೊಳಿಸಿ, ಸಾಕಾರವೆಂಬ ಸುಪ್ಪತ್ತಿಗೆಯ ಮೇಲೆ ಓಂಕಾರವೆಂಬ ಹೊದಿಕೆಯ ಹೊದ್ದು ನಿರಾಕಾರವೆಂಬ ನಿರ್ಮಲತೆಯನಪ್ಪಿ ನಿತ್ಯ ತೃಪ್ತರಾಗಿ ರಾರಾಜಿಸುತ್ತಿದ್ದರು.

ಇಂಥ ಸುಂದರ ಸ್ವರೂಪ ಜ್ಯೋತಿರ್ಮಯನಿಗೆ ಭಕ್ತರೆಲ್ಲಾ ಸೇರಿ ಪ್ರತ್ಯೇಕವಾದೊಂದು ನಿಲಯವನ್ನು ಶೃಂಗಾರವಾಗಿ ಊರ ಒಳಗಡೆಯೇ ಮಾಡಿ ಇರಲರ್ಪಿಸಿದರು. ಬಹಳ ಜನ ಭಕ್ತರಾಗಿ ಭಕ್ತಿಯನ್ನರ್ಪಿಸಲು ನಾಮುಂದು ತಾಮುಂದೆಂದು ಹಾತೊರೆಯುತ್ತಿದ್ದರು. ಜ್ಞಾನ ತೀರ್ಥನಿಗೆ ಸ್ನಾನ ಮಾಡಿಸಬೇಕೆಂಬವರನಂತ ಜನ, ಅಪ್ರಮೇಯನಿಗೆ ತುಪ್ಪವನ್ನೊತ್ತಬೇಕೆಂಬವರದಕ್ಕೆ ಘನ, ಶಿವಾಭಿನ್ನನ ಶಿವಾರ್ಚನೆಗೆ ತವಕಿಸುವ ಸೇವಕರವರೆಷ್ಟೋ ಮಂದಿ, ಚಿದ್ರೂಪ ಸ್ವಪ್ರಕಾಶನಿಗೆ ಧೂಪ ದೀಪವನ್ನು ಪ್ರೇರೇಪಿಸಿಕೊಡುವ ಸ್ಫುರದ್ರೂಪ ದಂಪತಿಗಳು ಹಲವರು. ಪ್ರಸಾದಪರತತ್ವನಿಗೆ ಸುಸ್ವಾದವನುಣಬಡಿಸಲು ವಿಶ್ವಾಸವುಳ್ಳ ದಂಪತಿಗಳು ಹಲವರು, ದಿಗಂಬರನಿಗೆ ದಿವ್ಯಾಂಬರವನುಡಕೊಡಲು ವಿಶ್ವಾಸವುಳ್ಳ ಸುಗಂಭೀರ ಸೇವಕರು ಕೆಲವರು. ಹೀಗೆ ಸೇವಕ ಜನಮನದ ಅಭೀಷ್ಟವನ್ನು ಅರಳಿದ ಹೂವಿನ ಪರಿಮಳವು ನೆರೆಹೊರೆಯವರ ಘ್ರಾಣೇಂದ್ರಿಯವನ್ನು ಸೂರೆಗೊಂಬಂತೆ ತನ್ನ ಮಹತ್ಪ್ರಭಾವವನ್ನು ದೆಸೆದೆಸೆಗೆಲಾ

ಪ್ರಸರಿಸಲು ಇತರೇ ಗ್ರಾಮಗಳವರು ಆಶ್ಚರ್ಯಗೊಂಡು ಬಂದು ಸ್ವಾಮಿಯನ್ನು ನಿರೀಕ್ಷಿಸಿ ಅತ್ಯಂತ ಅಪೇಕ್ಷಿಸಿ ತಮ್ಮ ತಮ್ಮ ಊರುಗಳಿಗೆ ಕರೆದುಕೊಂಡು ಹೋಗಿ ದರ್ಶನಾಶೀರ್ವಾದಗಳನ್ನು ಪಡೆದು ತಮ್ಮ ತನು-ಮನೋವ್ಯಾಕುಲಗಳಿಂದ ಬಿಡಲ್ಪಟ್ಟವರಾಗಿ ಚಿರಶಾಂತಿ ಸುಖಗಳಿಂದೊಡಗೂಡಿ ಭಕ್ತಿಯ ಆವೇಶದಲ್ಲಿ ತಲ್ಲೀನರಾಗಿ ಕೃತಾರ್ಥರಾಗುತ್ತಿದ್ದರು. ಭಕ್ತೈಕ ವಲ್ಲಭನು ಸದ್ಭಕ್ತರ ಮನೋಭೀಷ್ಟವನ್ನು ನಿರಾತಂಕವಾಗಿ ನೆರವೇರಿಸುತ್ತಾ ಎಲ್ಲಿ ಸಂಚಾರಮಾಡಿದರೂ ದೇವನೂರಿಗೇ ಬಂದು ಶ್ರೀ ಗುರುವು ಸಂತೋಷ ಸ್ವಲೀಲಾವಿಲಾಸದಿಂದ ಇರುತ್ತಿದ್ದರು.

ಭಕ್ತೈಕ ಮನೋನಾಥನು ದೇವನೂರಿನ ಹತ್ತಿರವಿರುವ ಚುಂಚನಹಳ್ಳಿ ಗ್ರಾಮದ ಕಡಲಕಟ್ಟೆ ಮಠದ ಚಂದ್ರಪ್ಪನೆಂಬುವರಿಂದ ಸೇವೆ ಮಾಡಿಸಿಕೊಂಡಿರುವುದನ್ನು ಜನರು ಹೇಳುತ್ತಾರೆ. ಇದು ಅತ್ಯಂತ ಮಹತ್ವಪೂರಿತವಾದ ವಿಷಯ. ಗುರುವಾಕ್ಯನ್ನು ಚಾಚೂ ತಪ್ಪದೆ, ವೇಳೆ ಮೀರದೆ, ಪ್ರತಿ ನುಡಿಯದೆ ನಡೆದ ಅವರು ಲೋಕಾತೀತ ಪುನೀತರು.

ಮೂಗೂರಿನಲ್ಲೊಂದು ದಿನ ನಮ್ಮೀ ಸ್ವಾಮಿ, ಶ್ರೀ ಗುರುಶಾಂತ ಮಲ್ಲೇಶ ಪ್ರಭುವು ತಮ್ಮ ಶಿಷ್ಯ ಮಾದಪ್ಪನೆಂಬುವನ ಮನೆಯಲ್ಲಿ ಇಳಿದುಕೊಂಡಿದ್ದರು. ಗುರುದರ್ಶನಕ್ಕೆಂದು ನೆರೆಹೊರೆಯ ಗ್ರಾಮಗಳಿಂದ ಭಕ್ತರು ಗುಂಪು ಗುಂಪಾಗಿ ಬಂದುಬಿಟ್ಟರು. ಸನ್ನಿಧಿಗೆ ಬಂದ ಭಕ್ತರ ಬಳಗಕ್ಕೆ ಅಡುಗೆಮಾಡಲು ಮನೆಯಲ್ಲಿ ಹಾಗೂ ಹಗೇವಿ (ಗುಳಿ) ನಲ್ಲಿ ಜೋಳವಿಲ್ಲದೆ ಭಯಗ್ರಸ್ತರಾಗಿ ಕಂಗೆಟ್ಟು ಯೋಚನೆಗೊಂಡಿದ್ದ ಮಾದಪ್ಪನನ್ನು ಕರೆದು, ಏನೋ, ಯಾಕೊ ಅಡುಗೆ ವ್ಯವಸ್ಥೆ ಮಾಡಿಲ್ಲ? ಜೋಳವಿಲ್ವೇನೋ? ತೆಗೆಯೊ ಗುಳೀನ ಎಂದು ವರದಹಸ್ತನು ಪರುಷವಾಕ್ಕುಗಳನ್ನು ನುಡಿಯಲು, ಮಾದಪ್ಪನು ಕಿಂಕುರ್ವಾಣಿಯಿಂದ ಇಲ್ಲಾ ಗುರುವೆ ಜೋಳವಿಲ್ಲ. ಬರೇ ಗುಳಿ ಇದೆ, ಈ ಮೊದಲೇ ಎಲ್ಲವನ್ನೂ ತೆಗೆದುಕೊಂಡು ಬಳಕೆ ಎಲ್ಲಾ ಮುಗಿದುಹೋಗಿದೆ ಅಂತ ಹೇಳಿ ಬಿನ್ನೈಸಿದನು. ತುಂಬಿದ ಗುಳೀನ ಬರೀಗುಳಿ ಅಂತೀಯೇನೊ? ಯಾರೊ ನಿನಗೆ ಹೇಳಿದವರು



ಶ್ರೀ ಗುರುಮಲ್ಲೇಶ್ವರರ ಕರಸಂಜಾತರಾದ

ಶ್ರೀ ಭಿಕ್ಷದಾರ್ಯಸ್ವಾಮಿಗಳು

ತೆಗೆಯೋ ಹುಚ್ಚು ಮುಂಡೆ ಎಂದು ಗದರಿಸಿ ಹಾರೆಯನ್ನು ತರಿಸಿ ಎಲ್ಲರೂ ಕಾಣುವ ಹಾಗೆ ಬರೀ ಗುಳಿಯನ್ನು ಬರಾಬರಿ ತುಂಬಿದ ಗುಳಿಯನ್ನಾಗಿ ಮಾಡಿ ಜೋಳವನ್ನು ತೆಗೆಸಿ ಅಡುಗೆ ಮಾಡಿಸಿ ಭಕ್ತಸಮೂಹಕ್ಕೆಲ್ಲಾ ನೀಡಿ ಮಾಡಿಸಿ ಶಿಷ್ಯರ ಹೃತ್ಪದ್ಮವನ್ನರಳಿಸಿ ಮೆರೆದರು.

ಅದೇ ಮೂಗೂರು ಗ್ರಾಮದಲ್ಲಿ ತಾವೇ ಖುದ್ದು ನಿಂತು ಗಾರೆ ಗಚ್ಚು ಹಿಡಿದು ದಾಸೋಹ ಭಿಕ್ಷದ ಮಠವನ್ನು ಸಂಸ್ಥಾಪಿಸಿದರು. ಹಿಂದೆ ಕಲ್ಯಾಣ ಪಟ್ಟಣದ ಶರಣರೆಲ್ಲಾ ಉಳುವೆಗೆ ಹೊರಡುವಾಗ ಮಾಡಿದ ಗಣಪರ್ವ ಸಮಯದಲ್ಲಿ ಎಲ್ಲರಿಗೂ ತಾಂಬೂಲಕೊಡಲು ಶ್ರೀ ರೇಚಿ ತಂದೆಯವರು ನೇಮಕವಾಗಿದ್ದರು. ಬಿಳಿ ಎಲೆಯನೆಲ್ಲರಿಗಿತ್ತು ಉಳಿದೊಂದು ಕರಿ ಎಲೆಯನ್ನು ಬಳಿಯಲಿರ್ದೊರ್ವ ಗಣವರನಿಗೀಯೆ ಇದನೊಂದು ವಂಚನೆಯ ನೆಪಮಾಡಿ ಮುಂದಿನ ಮಹಾತ್ಕಾರ್ಯಕ್ಕೆ ಸುಭದ್ರ ಪುರುಷನೇ ಈತನೆಂದರಿತು ಶ್ರೀ ಚೆನ್ನಬಸವಣ್ಣನು ಕೈಲಾಸಕ್ಕೆ ಕರೆದೊಯ್ಯದೆ ಇಲ್ಲಿಯೇ ಬಿಟ್ಟುಹೋದರೆಂದು ವಿದಿತವಿದೆ. ಅದೇ ರೇಚಿ ತಂದೆಯು ಇದೇ ಮೂಗೂರು ಗ್ರಾಮದಲ್ಲಿ ರಾಚಪ್ಪ ತಂದೆಯಾಗಿ ಜನ್ಮತಾಳಿ ಸುದೈವ ಗುರುಮಲ್ಲಮಹಾಸ್ವಾಮಿಯ ಕರಕಮಲ ಸಂಜಾತರಾಗಿ ಕಾಯಕವೇ ಕೈಲಾಸವೆಂಬ ಸಾದೃಶ್ಯವನ್ನು ಬಾಯಿಂದುಸುರದೆ ನಡೆಯಿಂದ ತೋರಿಸಿ ಪವಿತ್ರ ಕಂಥೇಭಿಕ್ಷ ಕಾಯಕಾಚರಣೆಯಿಂದ ಗುರುಲಿಂಗ ಜಂಗಮಸೇವಾ ದುರೀಣರಾಗಿ ವರ್ತಿಸುತ್ತಾ ಗುರುಮಲ್ಲೇಶ ಪ್ರಭುವಿನ ಅಚ್ಚುಮೆಚ್ಚಿನ ಸಚ್ಚರಿತಮೂರ್ತಿಯಾದರು. ಸಾಕ್ಷಾತ್ ಗುರುಮಲ್ಲೇಶನ ಆಜ್ಞಾಬದ್ಧ ರಾಗಿ ಭಿಕ್ಷದ ಕಾಯಕದಿಂದ ಮೋಕ್ಷವೆಂಬುದು ಕರತಳಾಮಳಕವೆಂದು ಕಾಣಿಸಿದ ಕಾರಣ "ಭಿಕ್ಷದಪ್ಪ" ನವರೆಂಬ ನಾಮರೂಢವಾಗಿ ರಾಚಪ್ಪ ನವರೆಂಬುದು ಮರೆಸಿಹೋಯಿತು.

ಮತ್ತೊಬ್ಬ ಮರಿಮಾದಪ್ಪನೆಂಬ ಒಬ್ಬ ವೀರ ಶರಣರು ಗುರು ಮಲ್ಲೇಶ್ವರರನ್ನೇ ಪರಿಪರಿಯಿಂದ ಪರೀಕ್ಷಿಸಿ ನಿರುಪಮರೆಂದು ಮನಗಂಡು ಚರಣದಲಿ ಆನತರಾದರು. ಇದೇ ಮರಿಮಾದಪ್ಪನವರು ಭಿಕ್ಷದಪ್ಪನವ

ರನ್ನು ಭಕ್ತಿಯ ಒರೆಗಲ್ಲಿನಲ್ಲಿ ಒರೆದು ಪ್ರತ್ಯಕ್ಷ ಮೋಕ್ಷಸ್ವರೂಪ ಶ್ರೀ ಭಿಕ್ಷವಪ್ಪನೆಂದೊಪ್ಪಿ ಅವರ ಸ್ವರೂಪಕ್ಕೆ ಮತ್ತುಷ್ಟೂ ಮೆರಗು ತಂದರು. ಈ ಮರಿಮಾದಪ್ಪ ಶರಣರು ಕುರಹಟ್ಟಿಯಲ್ಲಿ ಲಿಂಗೈಕ್ಯರಾಗಿ ಪೂಜ್ಯ ಗದ್ದಿಗೆಯಾಗಿ ಒಪ್ಪಿರುವರು.

ಹಾಗೆಯೇ ಅಷ್ಟಾವರಣದ ಮೋಹವನ್ನೇ ಮರೆತಿದ್ದ ಈ ವೀರಶೈವ ಜನಾಂಗವನ್ನು ತಮ್ಮ ಕೃಪಾಂತಃಕರಣ ಕಾರ್ಯಕಲಾಪಗಳಿಂದ ಸ್ವಲ್ಪ ಸ್ವಲ್ಪವಾಗಿ ತಿದ್ದುತ್ತಾ ಶ್ರೀ ಗುರುಮಲ್ಲೇಶ ಪ್ರಭುವು ಕಲ್ಲಿನಂತಹ ಒರಟು ಮೊರಟರನ್ನು ಸಲ್ಲೀಲೆಯಿಂದ ತಿಳುಹಿಸಿ ಮೆಲ್ಲಮೆಲ್ಲನೆ ಮಹಾನುಭಾವಿಗಳ ನ್ನಾಗಿ ಮಾಡುತ್ತಾ ಮೈಸೂರು ಸೀಮೆಯ ನಂಜನಗೂಡು, ಚಾಮರಾಜ ನಗರ, ಕೊಳ್ಳೇಗಾಲ, ಯಳಂದೂರು, ಟಿ. ನರಸೀಪುರ, ಗುಂಡ್ಲುಪೇಟೆ ತಾಲ್ಲೋಕಿನ ಹಳ್ಳಿಗಳಲ್ಲೆಲ್ಲಾ ಸಂಚರಿಸಿ ತಮ್ಮ ಪಾದಸ್ಪರ್ಶದಿಂದ ಪವಿತ್ರಗೈದು, ತಮ್ಮ ಪರುಷಹಸ್ತದಿಂದ ಪತಿತರನ್ನೆಲ್ಲಾ ಪಾವನಮಾಡಿ ದೃಷ್ಟಿಸೂತ್ರದಿಂದ ನಿಜನಿಷ್ಠೆ ನೆಲೆಗೊಳಿಸಿದರು.

ಮಹಾಸ್ವಾಮಿಯವರ ಶಿಷ್ಯರಲ್ಲಿ ಕನಕಳ್ಳಿ ಬಸಪ್ಪತಾತನವರು ಬಹಳ ಹಿರಿಯ ಶರಣರು. ಇವರು ಇತ್ತೀಚೆಗೆ ಶ್ರೀ ಮಠದ ಉಗ್ರಾಣಾಧಿ ಕಾರಿಗಳಾಗಿದ್ದು ಮಠದಲ್ಲೇ ಲಿಂಗೈಕ್ಯರಾಗಿ ಪವಿತ್ರಗದ್ದುಗೆಯಾಗಿ ಮೆರೆ ದಿದ್ದಾರೆ.

ಹಿರಿಯೂರು ಸಪ್ಪೆ ವೀರಪ್ಪನವರೆಂಬೊಬ್ಬರು ಅಸಾಧ್ಯ ಪುರುಷರು. ಇವರು ಯಾರನ್ನೂ ಲಕ್ಷಿಸಿದವರಲ್ಲ. ಇಂಥವರು ಶಿವನ ಫಾಲಾಕ್ಷಿ ಯಿಂದುರಿದ ಮನ್ಮಥನಂತೆ ಮದ ಉಡುಗಿ ಪೂರ್ವಾನುಭವಿಗಳಾಗಿ ಪುರಾ ತನರಂತೆ ಬಾಳಿ ಬದುಕಿದರು.

ಕುದೇರಿನಲ್ಲಿ ಕಿನ್ನಾರಿ ಸುಬ್ಬಣ್ಣ ಮತ್ತು ಅವರ ಪತ್ನಿ ಪಾರ್ವತಮ್ಮ ಎಂಬಿಬ್ಬರು ದಂಪತಿಗಳು ಗುರುಮಲ್ಲೇಶ ಪ್ರಭುವಿನ ಶಿಷ್ಯರು. ಒಳ್ಳೇ

ಭಕ್ತಿನಿಷ್ಠರು. ಇವರ ಮನೆಯಲ್ಲಿ ಶ್ರೀ ಗುರುಮಲ್ಲೇಶ ಪ್ರಭುವು ಕುಳಿತಿದ್ದ ಹಾಗೆಯೇ, ಪಾರ್ವತಮ್ಮಾ! ಯಾಕೋ ಕಾಣೆ ಈಹೊತ್ತು ಹೋಳಿಗೆ ತಿನ್ನಬೇಕು ಅನ್ನೋಹಾಗಿದೆ ಮಾಡ್ತಿ ಏನಮ್ಮ ಎಂದರು. ಎಂದಾಕ್ಷಣವೇ ಪಾರ್ವತಮ್ಮನು ಮನೆಯೊಳಗಿನಿಂದ ಓಡಿಬಂದು ನಮಸ್ಕರಿಸಿ, ಅಪ್ಪಣೆ ಗುರುವೆ ಮಾಡ್ತೇನೆ ಎಂದು ಹೇಳಿ ಬಹಳ ಸಡಗರದಿಂದ, ಗುರುಗಳಿದ್ದಲ್ಲಿ ಸುಮಾರು ಹೆಚ್ಚಾಗಿಯೇ ಮಾಡಬೇಕೆಂಬುದನ್ನು ತಿಳಿದಿದ್ದ ಆ ಶಿಷ್ಯೆ ಸುಮಾರು ಇಪ್ಪತ್ತು ಇಪ್ಪತ್ತೈದು ಮಂದಿಗಾಗುವಷ್ಟನ್ನು ಸಜ್ಜುಗೊಳಿಸಿ ಇನ್ನೇನು ಊಟಕ್ಕೆ ನೀಡಬೇಕು ಅಷ್ಟರಲ್ಲೇ ನೆರೆಹೊರೆಯ ಗ್ರಾಮಗಳಿಂದ ಸುಮಾರು ಇನ್ನೂರುಮಂದಿ ಗುರುದರ್ಶನಕ್ಕೆಂದು ಬಂದುಬಿಟ್ಟರು. ಆಗಲೇ ದಂಪತಿಗಳ ಹೃದಯವು ತಡಬಡನೆ ಬಡಿದುಕೊಳ್ಳಲು ಪ್ರಾರಂಭಿಸಿತು. ಕೂಡಲೇ ಗುರುಗಳು ಇನ್ನೇನು ಅಡಿಗೆ ಆಯ್ತೇನಮ್ಮಾ ನೀರು ತಂದುಕೊಡು, ಹಸಿವಾಗ್ತಾಯಿದೆ ಎಂದೆರಡು ಮೂರು ಸಾರಿ ಕುಳಿತಲ್ಲೇ ಹೇಳಿದರು. ಪಾಪ, ಭಯಗ್ರಸ್ತರಾದ ದಂಪತಿಗಳು ಕೋಣೆಯೊಳಗಿನಿಂದ ಹೊರಬರದೆ ಒಳಗೇನೇ ನಡುಕಗೊಂಡು ಒಬ್ಬರಿಗೊಬ್ಬರು ಏನ್ಮಾಡೋದು! ಇಷ್ಟೊಂದು ಜನಕ್ಕೆ ಹೇಗೆ ಮಾಡೋದು ಎಂದು ಕರ್ಯಬಾಯಿಯನ್ನು ಒದರಿಕೊಂಡು ಗೊಣಗುಟ್ಟುತ್ತಿರಲು ಮನೋನಾಥನು ಕುಳಿತಲ್ಲಿಂದೆದ್ದು ಮನೆಯೊಳಕ್ಕೆ ಬಂದು ಕೋಣೆಯ ಬಾಗಿಲಲ್ಲಿ ಕುಳಿತು, ಏನಿನ್ನೂ ಒಳಗೆ ಮಾಡೋದು ತಕ್ಕಮ್ಮಾ ತಣಿಗೇನ, ನೀಡನ್ನು ಇಲ್ಲಿ ಹಸಿವಾಗ್ತಾ ಇದೆ ಎಂದಾಗಲೇ ಒಂದು ಬಟ್ಟಲಿಗೆ ಎಡೆಮಾಡಿ ತಂದು ಮುಂದಿಟ್ಟು ನಮಸ್ಕರಿಸಲು, ಸ್ವಾಮಿಯು ಬಟ್ಟಲಮೇಲೆ ಕೈಯೂರಿ ಇನ್ನು ಕೊಡಮ್ಮ ಎಲ್ಲರಿಗೂ ನೀರ್ನ ಎಂದಾಜ್ಞೆ ಮಾಡಲು ಮರುಮಾತಾಡದೆ ದಂಪತಿಗಳಿಬ್ಬರು ಎಲ್ಲರಿಗೂ ಅಗ್ಗವಣಿಯನ್ನಿತ್ತು ಸಂಪೂರ್ಣ ಊಟಕ್ಕೆ ಬಡಿಸಿದರು. ಭೃಂಗದಿಂದ ಚುಚ್ಚಲ್ಪಟ್ಟ ಕೀಟ ತನ್ನಂಗವನ್ನೇ ಮರೆತು ಹೇಗೆ ಭೃಂಗನಾಗುವುದೋ ಹಾಗೆ ಗುರುವಾಜ್ಞೆಯ ಶಬ್ದ ನಾದದೊಳಗಾದ ದಂಪತಿಗಳು ಅದು ಹೇಗೆ ಎಲ್ಲರಿಗೂ ನೀರನ್ನು ಕೊಟ್ಟರೋ, ಅದು ಹೇಗೆ ಉಣಲಿಕ್ಕಿದರೋ, ಅವರಿಗೇ ಗೋಚರವಿಲ್ಲ! ಕೊನೆಗೆ ಎಲ್ಲರಿಗೂ ತೃಪ್ತಿಯಾಯಿತು. ಇನ್ನೂ ನಾಲ್ಕೈದು ಮಂದಿಗಾಗುವಷ್ಟು

ಪ್ರಸಾದ ಉಳಿಯಿತು. ಸ್ವಾಮಿ ಮಾತ್ರ ಹೇಗೆ ಮೊದಲು ಕೈಯ್ಯೂರಿದ್ದಾರೋ ಹಾಗೆಯೇ ತುತ್ತೆತ್ತದೆ ಕುಳಿತಿದ್ದರು. ಈ ದಂಪತಿಗಳು ಕೋಣೆಯೊಳಗೆ ಗುಸುಗುಸು ಪಿಸುಪಿಸು ಮಾತಾಡುತ್ತಾ ಆಶ್ಚರ್ಯಚಕಿತರಾಗಿ ಕೇವಲ ಇಪ್ಪತ್ತು ಜನರಿಗೆಂದು ಮಾಡಿದ್ದ ಅಡುಗೆ ಇನ್ನೂರು ಜನರಿಗೂ ತೃಪ್ತಿಯಾಗಿ ಇನ್ನೂ ನಾಲ್ಕೈದು ಜನರಿಗಾಗುವಷ್ಟು ಉಳಿದಿದೆಯಲ್ಲಾ ಏನು ವಿಚಿತ್ರ ! ನಾವುಗಳು ನೀಡಿದ್ದೇ ನಮಗೇ ಗೋಚರವಿಲ್ಲವಲ್ಲ. ನಮ್ಮ ಗುರುಗಳು ಎಂತಹ ಮಹಿಮರು, ಎಲ್ಲವೂ ಆ ಗುರುಮಲ್ಲಪ್ಪನ ಆಟ ಎನ್ನುತ್ತಿರಲು, ಸ್ವಾಮಿಯು, " ಹ್ಣ ! ಈಗೇನ್ಮಹಾ ಆಗ್ಬಿಟ್ಟೆರೋದು, ಈ ಗುರುಮಲ್ಲಯ್ಯ ಕಣ್ಮುಚ್ಚಿಕೊಂಡು ಕೂತ್ಗೊಳ್ತಾನಲ್ಲ ಆಗ ನೋಡು ಹಾಸಿದ ಬಟ್ಟಲನ್ನು ಎತ್ತದೆ ಉಣ್ತಾದೆ. ಈಗೇನ್ನೋಡ್ತೀಯೆ ? " ಎಂದು ಒಂದೆರಡು ತುತ್ತನ್ನು ಸಲಿಸಿ ಶೇಷವನ್ನು ದಂಪತಿಗಳಿಗಿತ್ತು ನಲಿದೆದ್ದರು.

ಲೀಲಾಮೂರ್ತಿ ಶ್ರೀ ಗುರುಮಲ್ಲೇಶ್ವರರು ಸ್ನಾನ ಮಾಡುತ್ತಿದ್ದುದು ಒಂದು ನವೀನ ಸೊಬಗು ಹಾಗೂ ಮಹತ್ವದ ಒಂದು ವಿಷಯ. ಅದು ಹೇಗೆಂದರೆ ಮೂವತ್ತು ನಲವತ್ತು ಬಿಂದಿಗೆ ನೀರು ಹಿಡಿಯುವ ದೊಡ್ಡ ದೊಡ್ಡ ಕಡಾಯಿಗಳು ಮೂರು ನಾಲ್ಕರಲ್ಲಿ ಗುಳಗುಳನೆ ನೀರು ಕಾಯುತ್ತಿರಬೇಕು. ತಣ್ಣೀರು ಬೇರೆ ಬೇರೆ ಕಡಾಯಿಗಳಲ್ಲಿ ತುಂಬಿರಬೇಕು. ಬೆಣ್ಣೆಕಾಸಿದ ಸಪ್ಪೆದುಪ್ಪವನ್ನು ನಾಲ್ಕೈದು ಜನ ಬಲಾಢ್ಯರು ಸೇರಿ ಸ್ವಾಮಿ ಮೈಗೆಲ್ಲಾ ಬಲವಾಗಿ ತಿಕ್ಕಿ ಒತ್ತಬೇಕು, " ಅಳಿಯುತ್ತಾ ಅಳಿಯುತ್ತಾ ಅಳಿಯುವವರು ಬಳಲಬೇಕಲ್ಲದೆ ಕೊಳಗ ಬಳಲುವುದೇ ಅಯ್ಯಾ " ಅಂದಹಾಗೆ ಎರಡು ಮೂರು ಗಂಟೆಗಳ ಕಾಲ ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಒತ್ತಿಒತ್ತಿ ತಿಕ್ಕಿದವರೂ ತಾವೇ ಚಿತ್ತಾಗಬೇಕಲ್ಲದೆ, ಚಿತ್ತದವಲ್ಲಭನು ಮಾತ್ರ ನಿರಾಯಾಸವಾಗಿ ನಗುತ್ತಾ ನಗಿಸುತ್ತಾ ಕುಳಿತುಬಿಡುತ್ತಿದ್ದರು. ಆಮೇಲೆ ಸ್ವಲ್ಪ ಹೊತ್ತು ಕಳೆದು ಸ್ನಾನಕ್ಕೆ ಕುಳಿತುಬಿಟ್ಟರೆ ಪಾತ್ರೆಗಳಿಗೆ ಅಗರಗಡ್ಡಿ ಕಟ್ಟಿಕೊಂಡು ನೀರು ಹಾಕಬೇಕಲ್ಲದೆ ಬರಿಗೈಯಿಂದ ಪಾತ್ರೆಹಿಡಿದು ನೀರು ಹಾಕಿದವರಿಲ್ಲ. ಏಕೆಂದರೆ ಕೈತಡೆಯಲಾರದಷ್ಟು ಬಿಸಿ, ಮತ್ತೊಬ್ಬರು ಆ ನೀರನ್ನು

ಹಾಕಿಕೊಂಡರೆ ಮೈಯೆಲ್ಲಾ ಹೊಪ್ಪಳವೇಳುವುದಲ್ಲದೆ ಪ್ರಾಣವು ಸಹ ಉಳಿಯುವುದಿಲ್ಲ. ಅಂಥಾ ನೀರು. ಮನೆಯೊಳಗೆ ಈ ರೀತಿ ಸ್ನಾನವಾಗೋಣ ಹೊರಗೆ ಬಂದ ನೀರು ಬೀದಿ ತುಂಬಾ ಕಾಲುವೆಯಾಗಿ ಹರಿದು ಹೋಗುತ್ತಿತ್ತು. ಹರಿದು ಹೋಗುವ ನೀರಿನ ಮೇಲೆ ಮಿರುಗಿ ತೇಲುವ ತುಪ್ಪವಂತೂ ಸರಾಸರಿ ಸೇರಿನಷ್ಟು ಹೆಪ್ಪುಗಟ್ಟಿ ನಿಲ್ಲುತ್ತಿತ್ತು. ಇದನ್ನು ಪ್ರತಿದಿನವೂ ನೋಡಿ ನೋಡಿ ಸಹಿಸಲಾರದೆ ಓರ್ವ ಮಾಸ್ಟರ್ ಸುಬ್ಬಣ್ಣ ಅನ್ನುವವರು ಅಡ್ಡಲಾಗಿ ಕಟ್ಟೆಹಾಕಿ ಬೀದಿಯಲ್ಲಿ ಕೆರೆಯಂತೆ ತಡೆದು ಬಿಟ್ಟರು. ಇದರಿಂದ ತಿರುಗಾಡುವ ಜನರಿಗೆ ತೊಂದರೆ ಮಾಡಿದ್ದರಿಂದ ಸ್ವಾಮಿಯ ಮನಸ್ಸಿಗೆ ಬೇಸರವಾಗಿ ಕಠಿಣ ಶಬ್ದ ಹೊರಹೊಮ್ಮಿತು. ಅಂದಿನಿಂದ ಸುಬ್ಬಣ್ಣ ಅವರ ಮನೆ ತುಂಬಾ ಕಷ್ಟಕ್ಕೆ ಸಿಕ್ಕಿಕೊಂಡು ಆಸ್ತಿಪಾಸ್ತಿಗಳು ಬೇರೆಯವರ ಕೈವಶವಾದುವು ಎಂದು ಇಂದಿಗೂ ಜನರು ಹೇಳುವರು.

ಇದೇ ದೇವನೂರಿನಲ್ಲಿ ಹಳೇಬಾಯಿ ರಾಮಪ್ಪನೆಂಬೊಬ್ಬರು, ಒಳ್ಳೇ ಆಜಾನುಬಾಹು, ಬಲಾಢ್ಯ, ಮೊರಟುಮನುಷ್ಯರು. ಇಂಥ ಅವರು ಒಂದಾನೊಂದು ದಿನ ತಮ್ಮ ಮನೆಯಲ್ಲಿ ಕುಳಿತಿದ್ದಾಗ ಬೀದಿಯಲ್ಲಿ ಬರುತ್ತಿದ್ದ ನಮ್ಮ ಕಥಾಕರ್ತೃವು ಒಳನುಗ್ಗಿ ಕುಳಿತಿದ್ದ ರಾಮಪ್ಪನ ಮುಂದೆ ನಿಂತು ಇದ್ದಕ್ಕಿದ್ದ ಹಾಗೇನೆ ಏನೋ ರಾಮಣ್ಣ, ಮುಂದೆ ನಿನಗೊಂದು ಭಾರಿ ಕಂಟಕ ಬರುತ್ತದೆ ಉಪದೇಶ ಮಾಡಿಕೊಡ್ತೀನಿ ಅದು ಕಳೆದು ಹೋಗಿ ಬಿಡುತ್ತದೆ ಇಲ್ಲದೇ ಇದ್ದರೆ ಅದರಲ್ಲಿ ಮುಗಿದು ಹೋಗಿಬಿಡ್ತೀಯೆ ಕಣೋ ಎಂದರಂತೆ. ಅದಕ್ಕೆ ಉಪದೇಶದ ಗಂಧವನ್ನೇ ಅರಿಯದ ರಾಮಪ್ಪನು ಹೋಗಿ ಬುದ್ಧಿ ನನಗುಪದೇಶವೂ ಬ್ಯಾಡಿ ಗಿಪದೇಶವೂ ಬ್ಯಾಡಿ ಎಂದೆದ್ದು ಹೊರಟುಹೋದನಂತೆ. ಪುನಃ ಸ್ವಲ್ಪದಿನದಲ್ಲೇ ಏನೋ ಕಾರಣ ಹತ್ತಿರವಿರುವ ನಂಜನಹಳ್ಳಿ ಗ್ರಾಮಕ್ಕೆ ಹೋಗಿ ಅಂತ್ಯಜನೊಬ್ಬನ ಮನೆಗೆ ಮದೋನ್ಮತ್ತತೆಯಿಂದ ನುಗ್ಗುತ್ತಿರಲು ಭರ್ಜಿಯಿಂದ ಇರಿಸಿಕೊಂಡು ಸತ್ತುದಾಗಿ ಎಲ್ಲರೂ ಹೇಳುತ್ತಿರುವುದಲ್ಲದೆ ಮುಪ್ಪಿನ ಅವರ ಮಗ

ಕೆಂಪಣ್ಣವರೇ ಹೇಳುತ್ತಿದ್ದಾರೆ. ಇಂಥ ಪವಾಡಗಳು ಶ್ರೀ ಗುರು ಮಲ್ಲೇಶ ಮಹಾತ್ಮೆಯಲ್ಲಿ ಅದೆಷ್ಟೋ.

ಮುಕ್ತಿನಾಥನಾದ ನಮ್ಮೀ ಕಥಾಕರ್ತೃವಿನ ಬಳಿಯಲ್ಲಿ ಲೀಲಾ ವಿಲಾಸದಿಂದ ಲಿಂಗಲೋಲುಪ್ತರಾದ ಶ್ರೀ ಮೋಹನಿಸ್ವಾಮಿ, ಶ್ರೀ ವೀರತ್ತಸ್ವಾಮಿ ಎನ್ನುವ ಮಹಾಪುರುಷರು ಮಹದಾಪಂಪ ಮಾನಸ ರಾಗಿದ್ದು ಲಿಂಗೈಕ್ಯರಾಗಿ ಮಹಾಮಠದಲ್ಲೇ ಗದ್ದುಗೆಯಾಗಿ ಪೂಜೆಗೊಳ್ಳು ತ್ತಿದ್ದಾರೆ.

ಗುರುರಾಮಪ್ಪನೆಂಬೊಬ್ಬರು ಯೋಗ ಬಲ್ಲಿದರು. ಸ್ವಾಮಿಯ ಶಿಷ್ಯರು. ಒಂದು ದಿನ ಗುರುಸ್ವಾಮಿಯವರನ್ನು ಕುರಿತು, ಗು ರು ವೆ, ನನಗೆ ಬಾಣಾಸುರನ ಬೆಟ್ಟಕ್ಕೆ ಹೋಗಿ ಬರಬೇಕೆಂಬ ಆಶೆ ಇದೆ, ಸ್ವಾಮಿ ಅಪ್ಪಣೆಕೊಡಬೇಕು ಎಂದು ಕೇಳಿದರು. ಅದಕ್ಕೆ ಗುರು ಸಾರ್ವಭೌಮ ಶ್ರೀ ಗುರುಮಲ್ಲೇಶ ಮಹಾತ್ಮನು, ಬೇಡ ಗುರುರಾಮು ನಿನ್ನಿಂದ ಹೋಗಲು ಸಾಧ್ಯವಿಲ್ಲ. ಅಲ್ಲಿಗೆ ಹೋಗುವುದು ತಾನೇ ಏಕೇ? ಎಂದು ಬಿಟ್ಟರು. ಗುರುರಾಮಪ್ಪನವರು ಮತ್ತೆ ಬಿನ್ನೈಸಿ, ಇಲ್ಲಾ ಗುರುವೆ ತಾವು ಬೇಡವೆಂದು ತಿಳಿಸದೆ ನನಗೆ ಆಶೀರ್ವದಿಸಲೇಬೇಕು. ಅದೇನೋ ಹೋಗಬೇಕೇಂಬ ಅಪೇಕ್ಷೆ ಬಹಳ ಕಾಡ್ತಾ ಇದೆ. ಕೊನೆಗೆ ತಾವು ಹೋಗೆನ್ನ ಲಾಗದಿದ್ದರೂ ನಾನಂತೂ ಹೋಗಿಯೇ ಬರುತ್ತೇನೆ ಎಂದರು. ಹಾಗಾದರೆ ಹೋಗ್ತಿಯಾ ನೀನು! ಹೋಗಪ್ಪಾ ಎಂದು ಮುಗುಳ್ನಗೆಯಿಂದ ನುಡಿ ಯಲು, ತಮ್ಮಿಂದ ಏನಾದರೊಂದನ್ನು ಆಶೀರ್ವದಿಸಿ ಕೊಡಬೇಕೆಂದು ಗುರುರಾಮಪ್ಪನವರು ಕೇಳಲು, ಹ್ಞೂ. ತೆಗೆದುಕೊ ಎಂದು ತಮ್ಮಲ್ಲಿದ್ದ ಅಕ್ಷಯಪಾತ್ರೆಯನ್ನು ಕೊಡಲು, ಗುರುರಾಮಪ್ಪನವರು ಕ ರ ದ ಲ್ಲಿ ಹಿಡಿದು ಬಹುಸಡಗರದಿಂದ ಹೊರಟರು. ಅನೇಕ ಊರು, ಗಿರಿ, ವನ. ನದಿಗಳನ್ನೆಲ್ಲಾ ದಾಂಟಿ ನೆಗೆದು, ಸಂಘಟಿಸಿದ ಎಡರುತೊಡರು ಅಡ್ಡಿ ಆತಂಕಗಳನ್ನೆಲ್ಲಾ ಜಯಿಸಿ ಬಾಣಾಸುರನ ಬೆಟ್ಟದ ಬುಡವನ್ನು ಮುಟ್ಟಿ ದರು. ಭೋರೆಂದು ಬರುವ ದುಂಬಿಗಳ ಹೊಡೆತವನ್ನು ತಾಳಿಕೊಂಡು ಹೇಗೋ ಮಾಡಿ ನಡುಗಿರಿಗೆ ನಡೆಯುತ್ತಾ, ಗುರುಗಳು ನೀ ಹೋಗಲಾಲ

ಬೇಡ ಅಂತ ಹೇಳಿದರು, ನಾ ಬಿಟ್ಟೇನೆ? ಕೊನೆ ಮುಟ್ಟ ಹೋಗಿ ಅಮೃತ ಕೊಳದಲ್ಲಿ ಸುಧಾರಸವನ್ನು ಪಾನಮಾಡಿ, ಈ ಅಕ್ಷಯಪಾತ್ರೆ ಯಲ್ಲಿ ತುಂಬಿ ತೆಗೆದುಕೊಂಡು ಹೋಗಿ ಸ್ವಾಮಿಗೆ ತೋರದೇ ಹೋದರೆ.... ಎಂದುಕೊಂಡು ಅಂತರಂಗದ ಗರ್ವದಿಂದಡಿಯಿಡುತ್ತಾ, ತನ್ನ ಪ್ರಯತ್ನ ಈಡೇರಿತೆಂಬ ಅಟ್ಟಹಾಸದಿಂದ, ಬಾಣಾಸುರನ ಬೆಟ್ಟದ ತುಟ್ಟತುದಿ ಯನ್ನು ನೋಡಿಯೇ ನೋಡುವೆನೆಂಬಷ್ಟರಲ್ಲಿಯೇ, ದಿಟ್ಟ ಭಸಿತ ಶಿವಾಕ್ಷ ಮಾಲೆಗಳನ್ನು ಧರಿಸಿ, ಜಡೆಗಟ್ಟಿ, ಕಾವಿ ಕಾಷಾಂಬರವನ್ನುಟ್ಟು ಯೋಗ ದಂಡಕಕ್ಷೆಯೊಳಿದ್ದ ಸನ್ಯಾಸಿಯೋರ್ವನು ದೃಗ್ಗೋಚರವಾಗಿ ಹೇ, ಯಾರು ನೀನು? ಏನು ಬಂದೆ? ಎಂದು ಪ್ರಶ್ನಿಸಲು, ನಾನು ದೇವನೂರು, ಗುರುರಾಮಪ್ಪನೆಂಬುದಾಗಿ ನನ್ನ ಹೆಸರು. ನೋಡೋದಿಕ್ಕೋಸ್ಕರ ಬಂದೆ ಎಂದು ಉತ್ತರಿಸಿದರು. ಮತ್ತೆ ಸನ್ಯಾಸಿ ಈಗೆಲ್ಲಿಗೆ ಹೋಗ್ತೀಯೆ? ಅದೇನು ನಿನ್ನ ಕೈಯಲ್ಲಿರುವುದು? ಎಂದು ಕೇಳಿದರು. ಅಮೃತ ಕೊಳಕ್ಕೋಗ್ತೇನೆ, ಇದು ನನ್ನ ಅಕ್ಷಯಪಾತ್ರೆ ಎನ್ನಲು, ಯಾರದ್ದು? ಎಂದು ಸಂನ್ಯಾಸಿ ಕೇಳಲು ನನ್ನದು ಎನ್ನುವ ಶಬ್ದ ಸಮಗ್ರವಾಗಿ ಕೇಳಿಸುವಷ್ಟರಲ್ಲೇ ಗುರುರಾಮಪ್ಪನವರ ಕೆನ್ನೆಗೆ ಪೆಟ್ಟುಬಿದ್ದು, ಅಕ್ಷಯ ಪಾತ್ರೆ ಇಲ್ಲವಾಗಿ ತಾಳುಬೆಟ್ಟದಲ್ಲಿ ಹೊರಳಾಡುತ್ತಾ ಬಿದ್ದಿದ್ದು, ಪ್ರಜ್ಞೆ ಬಂದಮೇಲೆ ತಡಬಡ ಎದ್ದು ದುಂಬಿಗಳ ಹೊಡೆತವನ್ನು ತಾಳಲಾರದೆ ಬಂದ ದಾರಿ ಹಿಡಿದು ಓಡಲಾರಂಭಿಸಿದರು. ಇತ್ತ ಸದ್ಭಕ್ತ ಮಾಹೇಶ್ವರರ ಸಮೂಹದಲ್ಲಿ ವಿಚಾರ ವಿನಿಮಯಮಗ್ನರಾಗಿ ಕುಳಿತಿದ್ದ ಸರ್ವಾಂತ ರ್ಯಾಮಿಯು ಫಕಫಕನೆ ನಕ್ಕು ಗುರುರಾಮನು ಅಕ್ಷಯ ಪಾತ್ರೆಯನ್ನು ಕಳೆದುಕೊಂಡು ಬಿದ್ದು ಓಡಿ ಬರುತ್ತಿದ್ದಾನೆ ಕಣ್ರೋ ಅಂತ ಹೇಳಿ ಮಾತ ನಾಡುತ್ತಾ ಇರಲು, ನೆರೆದವರೆಲ್ಲಾ ಆಶ್ಚರ್ಯ ಮಾನಸರಾಗಿ ಗುರು ಮಲ್ಲೇಶ ಮಹಾಸ್ವಾಮಿಯ ಮುಂದೆ ಗೋಚರಿಸಲ್ಪಟ್ಟ ಅಕ್ಷಯ ಪಾತ್ರೆ ಯನ್ನು ನೋಡಿ ಕೊಂಡಾಡುತ್ತಾ ಇರುವಲ್ಲಿಗೆ, ಬಹಳ ಭಯದಿಂದ ಕಣ್ಣೀರು ಸುರಿಸುತ್ತಾ ಓಡಿಬಂದ ಗುರುರಾಮಪ್ಪನವರು ಗುರುಮಲ್ಲೇಶ ಪ್ರಭುವಿನ ಪಾದಾರವಿಂದಗಳ ಮೇಲೆ ಬಿದ್ದು ಒರಲುತ್ತಿರಲು, ದಯಾಮಯ ಶ್ರೀ ಗುರುಸ್ವಾಮಿಯು, ಗುರುರಾಮು! ಏನಿಷ್ಟು ಬಳಲುವೆ? ಬೇಡ

ಅಂದರೆ ಕೇಳಿದೆಯಾ? ಇನ್ನೂ ನೀನು ನಿನ್ನ ಅಂತರಂಗದ ಮದವನ್ನು ಬಿಡಲಿಲ್ಲವೆ? ಇನ್ನಾದರೂ ಭಯಭಕ್ತಿಯನ್ನು ಕಲಿತುಕೊ ಎಂದು ಬುದ್ಧಿ ಹೇಳಿ ಸಮಾಧಾನಗೊಳಿಸಿದರು. ಎಲ್ಲರೂ ಭಯವಿಹ್ವಲರಾಗಿ, ಅಕ್ಷಯ ಪಾತ್ರೆಯನ್ನು ಇಲ್ಲಿಂದ ಕೊಟ್ಟು ಕಳುಹಿ, ಅಲ್ಲಿ ಕಿತ್ತುಕೊಂಡು ಹತ್ತಿರ ಬರಿಸಿದ ಸಚ್ಚಿದಾನಂದಮೂರ್ತಿ, ಪ್ರತ್ಯಕ್ಷ ಪರದೈವ ಶ್ರೀ ಗುರುಮಲ್ಲೇಶ ದೇವನನ್ನು ಅರಿತವರಾರು! ಎಂತಹವರಿಗೂ ಕಷ್ಟವೆ! ನಿರ್ವಿಷಯಿಗಳಲ್ಲ ದವರಿಗೆ ಮಾತ್ರ ಈ ಶ್ರೀ ಗುರುಮಲ್ಲೇಶ ಮಹಾತ್ಮೆ!

ಸೂರ್ಯನ ಮುಂದೆ ಮತ್ತೊಬ್ಬ ಸೂರ್ಯ ಸುಳಿದಂತೆ, ಸೂರ್ಯ ಕೋಟಿ ಪ್ರಕಾಶ ಶ್ರೀ ಗುರುಮಲ್ಲಾರ್ಯರಂ ನೋಡಲು ಸದಾ ದೊಡ್ಡ ದೊಂದು ಪರಶುವಂ ಬಗಲಲ್ಲಿಟ್ಟುಕೊಂಡು ಬಂದ ಕೊಡಲಿಸ್ವಾಮಿ ಎಂಬು ವರು ಬಯಲಿಗೆ ಬಯಲು ಬೆರೆತಂತೆ ಕೆಲವಾರು ತಿಂಗಳು ಲಿಂಗಾನಂದ ದಲ್ಲಿದ್ದುಕೊಂಡು ಸೌದೇ ಮರಗಳನ್ನು ಒಂದೇ ಏಟಿಗೆ ಸಿಗಿದುಬಿಡುತ್ತಿ ದ್ದರು. ಇದನ್ನು ನೋಡಿದವರು ಇವರೆಂತಹ ಅಸಹಾಯಶೂರರೆಂಬು ದಾಗಿ ಹೊಗಳುತ್ತಿದ್ದರು. ಹೀಗಿರಲು ದೀಪಾವಳಿ ಅಮಾವಾಸ್ಯೆಗೆ ಶ್ರೀ ಮಲೆ ಮಹದೇಶ್ವರನ ಬೆಟ್ಟಕ್ಕೆ ಜನರು ಪರಿಸೆ ಪರಿಸೆಯಾಗಿ ಹೋಗುತ್ತಿ ದ್ದರು. ಆ ಸಮಯದಲ್ಲಿ ಈ ಕೊಡಲೀಸ್ವಾಮಿಯು ನಾನೂ ಮಹದೇಶ್ವರ ಬೆಟ್ಟಕ್ಕೆ ಹೋಗಿ ಬರುತ್ತೇನೆ ಗುರುಮಲ್ಲಪ್ಪಾ ಎಂದು ನುಡಿಯಲು, ಓಹೋ! ಸ್ವಾಮಿ ತಾವು ದಯಮಾಡಲೇಬೇಕು ಆಗಲಿ ಅಂತ ಹೇಳಿ ಹತ್ತಿರದಲ್ಲಿದ್ದ ಶಿಷ್ಯರ ಪೈಕಿ ಕೆಸ್ತೂರು ಬಸಪ್ಪ, ಮತ್ತೊಬ್ಬ, ಈ ಇಬ್ಬ ರನ್ನೂ ಜೊತೆ ಮಾಡಿ, ಲೋ, ಬಸಪ್ಪಸ್ವಾಮಿಯವರು ಮಹದೇಶ್ವರ ಬೆಟ್ಟಕ್ಕೆ ಹೋಗ್ಬೇಕಂತೆ ನೀವೂ ಇತರ ಜೊತೆಯಲ್ಲಿಯೇ ಹೋಗಿ ಬಿಡದೆ ಜೊತೆಯಲ್ಲಿಯೇ ಕರೆದುಕೊಂಡು ಬರ್ತಿರೇನ್ರೋ? ಜೋಕೆ, ಎಡಬಿಡದೆ ಇರಬೇಕು ಕೊಂಡು ಬರುತ್ತೀರೇನು? ಹುಷಾರ್, ಸ್ವಲ್ಪವೇನಾದರೂ ಕಣ್ಣು ತಪ್ಪಿದರೆ ಇಲ್ಲ, ಎಚ್ಚರಿಕೆ, ಹೋಗಿ ಎಂದು ಬೀಳ್ಕೊಟ್ಟರು. ದೇವ ಪೂರಿಂದ ದಾರಿಯುದ್ದಕ್ಕೂ ಬೆಟ್ಟದವರೆವಿಗೂ ದಾರಿಯಲ್ಲಿ ಜೊತೆ ಯಲ್ಲಿಯೇ ಹೋಗಿದ್ದಾರೆ, ಬೆಟ್ಟದ ಮೇಲಕ್ಕೂ ಹತ್ತಿದ್ದಾರೆ, ಅಲ್ಲಿ, ಲೋ



ಕೂಡಲಿಸ್ವಾಮಿಯ ರೂಪದಲ್ಲಿ ಬಂದಿದ್ದ

ಶ್ರೀ ಮಲೇ ಮಹದೇಶ್ವರರು

ಬಸವಣ್ಣ, ಇಲ್ಲಿರ್ರೋ, ಸ್ವಲ್ಪ ಜಲಬಾಧೆ ಮಾಡಿ ಬರುತ್ತೇನೆ ಎಂದವರು ಒಂದು ಗಿಡದ ಮರೆಗೆ ಹೋಗಿದ್ದಾರೆ, ಮರುಕ್ಷಣವೆ ಕಣ್ಣಿಗೆ ಗೋಚರವಿಲ್ಲ ದಂತೆಯಾದರು ಕೊಡಲೀ ಸ್ವಾಮಿಗಳು. ಪಾಪ, ಇವರಿಬ್ಬರೂ ಗಾಬರಿ ಯಾಗಿ ಗಿಡದಡಿ ಮರದಡಿಗಳನ್ನೆಲ್ಲಾ ಹುಡುಕಾಡುತ್ತಾ, ಎಲ್ಲಿ ಹೋದರು ಎತ್ತ ಹೋದರು, ಏನು ಮಾಡುವುದಪ್ಪಾ, ಗುರುಗಳು ಒಂದರಗಳಿಗೆಯೂ ಎಡಬಿಡದೆ ಇರಿ ಎಂದು ಸಾರಿಸಾರಿ ಹೇಳಿದ್ದರಲ್ಲಪ್ಪ, ಹೋಗಿ ಇನ್ನೇನು ಹೇಳೋಣ ಎಂದು ಹಲುಬುತ್ತಾ ನಡು ಗಿರಿ, ಬುಡದ ಗಿರಿಯನ್ನೆಲ್ಲಾ ಸುತ್ತಿ, ಕೊಡಲಿಸ್ವಾಮಿ ! ಎಂದು ಕೂಗುತ್ತಾ ಪರಿಸೆಯನ್ನೆಲ್ಲಾ ಕೇಳಿ ಕೇಳಿ ಸತ್ತು ಸುಣ್ಣವಾಗಿ ದೇವಾಲಯದಲ್ಲಿಯೂ ಕಾಣದೆ ಹಿಂತಿರುಗಿದರು. ಇತ್ತ ಗುರುಮಲ್ಲೇಶ ಪ್ರಭುವು ಭಕ್ತರೊಡನೆ ಕುಳಿತು, ಕೊಡ್ಲಿ ಅಪ್ಪ ನನ್ನು ತಪ್ಪಿಸಿಬಿಟ್ಟು ಗಾಸಿಯಾಗಿ ಬರ್ತಾಇದ್ದಾರೆ ಕಣ್ರೋ. ನನ್ನ ಭಕ್ತ ರೆಲ್ಲಾ ಪೆದ್ದರು; ಜಾಣರಾಗಲಿಲ್ಲ. ಅಂತ ಹೇಳಿ ನಗ್ತಾ ಇರುವ ಸಮಯಕ್ಕೆ ಖಿನ್ನಮುಖರಾಗಿ ಬಂದ ಬಸಪ್ಪನು ಮತ್ತು ಜೊತೆಯವನೂ ನಡೆದ ಸಂಗತಿಯನ್ನೆಲ್ಲಾ ಸಾಂಗವಾಗಿ ಹೇಳಲು ಸ್ವಾಮಿಯು ನಕ್ಕು, ಅವರೇ ಮಲೇ ಮಹದೇಶ್ವರರು ಕಣ್ರೋ ಈ ಗುರುಮಲ್ಲಯ್ಯನನ್ನು ನೋಡೋ ದಿಕ್ಕೆ ಬಂದಿದ್ದರು. ಈಗ ಅವರ ಸ್ಥಾನಕ್ಕೆ ಹೋದರು ಎಂದರು. ಆಗ ಎಲ್ಲರಿಗೂ ಸಮಾಧಾನವಾಯಿತು.

ಹೀಗೆಯೇ ಖಾರದಸ್ವಾಮಿ ಅಂತ ಒಬ್ಬರು ಯಾವಾಗಲೂ ಸ್ನಾನ, ಲಿಂಗಪೂಜೆ ಮಾಡಿ ಖಾರವನ್ನೇ ಆಹಾರವನ್ನಾಗಿ ಉಪಯೋಗಿಸಿ ಪ್ರಾಣ ಲಿಂಗ ತೃಪ್ತಿಗೈಯ್ಯುತ್ತಿದ್ದರು. ಹೀಗೆ ನೆಲಬಿಲ ಜಪ ಸಮಾಧಿಯ ಮಹಿಮರೆಲ್ಲಾ ಶ್ರೀ ರೇಣುಕಾವತಾರಿಯ ಸಂದರ್ಶನಕ್ಕೆ ಬಂದು ಹೋಗು ತ್ತಿದ್ದರು.



## ಅಧ್ಯಾಯ ೬

ಹೀಗೆ ನಾನಾರೀತಿಯಿಂದ, ನಾನಾಕಡೆಯಿಂದ ಶ್ರೀಮನ್ನಿರಂಜನ ಗುರುಮಲ್ಲೇಶ್ವರರ ಸಂದರ್ಶನಕ್ಕೆಂದು, ನಾನಾಭೀಷ್ಟೆಗಳ ಪಡೆಯ ಬೇಕೆಂದು, ಹೋಗುವ ಬರುವ ಭಕ್ತ ಮಹೇಶ್ವರರ ಗುಂಪು ದಿನೇ ದಿನೇ ಹೆಚ್ಚಾಗುತ್ತಾ ಬಂತು. ಶ್ರೀ ಭಿಕ್ಷದಪ್ಪನವರು ಸತ್ವಗುಣಶೀಲರಾಗಿ, ಸತಿಪತಿನ್ಯಾಯದಿಂದ ಗುರುಮಲ್ಲೇಶ ಪ್ರಭುವಿಗೆ ಶ್ರದ್ಧಾಪೂರ್ವಕ ಸೇವೆ ಯಲ್ಲಿ ನಿಷ್ಠಾವಂತರಾಗಿ, ಕಂಥೇಭಿಕ್ಷದ ಕಾಯಕಾಚರಣೆಯನ್ನೆಡೆಬಿಡದೆ ಕಸಾ ಗುಡಿಸುವುದು, ಹುಲ್ಲು ತರುವುದು, ರಾಗಿ ಬೀಸುವುದು, ನೀರು ಸೇದುವುದು, ಗುರುಲಿಂಗ ಜಂಗಮರಿಗೆ ನೀಡಿ ಮಾಡುವುದು. ಈ ಎಲ್ಲಾ ಕಾರ್ಯಕ್ರಮಗಳನ್ನೂ ತಮ್ಮ ಮನಕ್ಕೆ ಮನಸ್ಸಾಕ್ಷಿಯಾಗಿ ಮಾಡುತ್ತಿದ್ದರಲ್ಲದೆ ಮತ್ತಿತರರಿಗರಿಯಬಾರದು. ಇಂಥಾ ಅಮಾನುಷ ವಲ್ಲದ ಭಕ್ತಿಪಂಥದ ಸೇವೆ ಇವರದು.

ನಿರ್ಗತಿಕರಿಗೆ ತಾನೇ ಗತಿಯಾದ ಶ್ರೀ ಗುರುಮಲ್ಲೇಶ ಗುರೋತ್ತ ಮನು ಬಡವರ ಬಂಧುವಾಗಿ ತಾವಿದ್ದ ಮಠವನ್ನು ಸ್ವಲ್ಪ ಜೀರ್ಣೋ ದ್ಧಾರ ಮಾಡುವ ನೆಪದಿಂದ ಕೂಲಿಗಾರರನ್ನೆಲ್ಲಾ ಬರಿಸಿ, ಇಲ್ಲಿ ಒಂದು ಗೋಡೆ ಹಾಕ್ರಿ ಅಂತ ಹೇಳಿ ಮಣ್ಣಿನಿಂದ ಹಗಲೆಲ್ಲಾ ಹಾಕಿಸಿ, ರಾತ್ರಿ ವೇಳೆ ತಾವು ನಿಂತು ಆಕಡೆ ಈಕಡೆ ನೋಡಿಬಿಟ್ಟು ಇದು ಸರಿಬರಲಿಲ್ಲ ಕಣ್ರೋ ತಳ್ಳಿಬಿಡ್ರೋ ಎಂದು ನೂಕಿ ಕೆಡವಿಸಿಬಿಟ್ಟು ಮರುದಿನ ಮತ್ತೆ ಬೇರೆ ಗೋಡೆ ಹಾಕಿಸುತ್ತಿದ್ದರು. ಹೀಗೆ ಪ್ರತಿದಿನ ಇದೇ ರೀತಿ ಕೂಲಿ ಕೊಡೋದು, ಹಾಕಿಸೋದು, ಕೆಡವಿಬಿಡೋದು. ಇದರಿಂದ ಬಡವರಿ ಗೆಲ್ಲಾ ದಿನಾ ಮೃಷ್ಟಾನ್ನ ಭೋಜನ ಮತ್ತು ಕೂಲಿ ಹಣ ಸಲೀಸಾಗಿ ಸುಖಜೀವನ ನಡೆಯುತ್ತಲಿತ್ತು. ಅಲ್ಲದೆ ದರ್ಶನಕ್ಕೆಂದು ನಿತ್ಯಬರುವ ಭಕ್ತರೆಲ್ಲಾ ತರುತ್ತಿದ್ದ ಬಗೆಬಗೆಯ ಭಕ್ಷ್ಯಾದಿಗಳ ಬುತ್ತಿಯನ್ನು

ಮುಗಿಸಲು ಸಾಧ್ಯವೇ ಇಲ್ಲದಾಗಿತ್ತು. ಈ ಕೆಲಸ ಕಾರ್ಯಗಳನ್ನು ನೋಡಿದ ಕೆಲವರು, ಏನಪ್ಪಾ, ದಿನಾಲು ಈ ಕೆಲಸ ಮಾಡಿಸುತ್ತಿದ್ದರೆ ಕೆಲಸ ಮುಗಿಯುವ ಹಾಗಿಲ್ಲ, ಹಣ ಖರ್ಚಾಗುವುದು ತಪ್ಪುವ ಹಾಗಿಲ್ಲ, ಯಾಕಪ್ಪ ಹೀಗೆ ಗುರುವೆ, ಎಂದು ಕಿಂಕುರ್ವಾಣದಿಂದ ಕೇಳಲು, ಅಲ್ಲಪೋ, ಬಡವರು ಇನ್ನು ಹ್ಯಾಗೆ ಜೀವನ ಮಾಡಬೇಕೋ ? ಅವರು ತಮ್ಮ ಹೆಂಡತಿ ಮಕ್ಕಳುಗಳನ್ನು ಸಾಕುವುದು ಹೇಗೋ ? ಸುಮ್ಮನೆ ದುಡ್ಡು ಕೊಟ್ಟರೆ ಈಸಿಕೊಳ್ಳುತ್ತಾರೇನೋ ? ಪಾಪ, ಈ ನೆಪದಿಂದ ಲಾದರೂ ಪ್ರಾಣಿಗಳಿಗೆ ಕಾಲಾನು ಕಳೀತದೆ. ಹಾಗ್ತಾನೆ ನಡೀತಾ ಇರಲಿ ಸುಮ್ಮನಿರ್ರೋ ಎಂದು ಹೇಳಿ ಆಲದಮರ, ಬಸುರೀಮರಗಳ ತೊಲೆ ಗಳನ್ನು ಹಾಕಿಸಿ ತೆಂಗಿನಗರಿ ಹೊದಿಸಿ ಪೇಲ್ಛಾವಣಿ ಮಾಡಿಸುತ್ತಿದ್ದರು. ಶ್ರೀ ಭಿಕ್ಷದ ಸ್ವಾಮಿಯವರು ಒಂದು ದಿನ ನಮಸ್ಕರಿಸಿ ಭಯಭಕ್ತಿಯಿಂದ ಕೈಮುಗಿದು ನಿಂತು ಗುರುವೆ, ತೇಗ, ಹೊನ್ನೆ ಇತ್ಯಾದಿ ಮರಗಳನ್ನು ಹಾಕಿಸಿ, ಇಟ್ಟಿಗೆ ಗಾರೆಯಿಂದ ಕಟ್ಟಿ ಮಂಗಳೂರು ಹೆಂಚುಗಳನ್ನು ಹಾಕಿ ಮಾಡೋಣ ಅಂತ ಆಸೆ, ಮಹಾಸ್ವಾಮಿಯ ಅಪ್ಪಣೆಯಾಗಬೇಕು ಎಂದರು. "ಏನು ಭಿಕ್ಷದಪ್ಪಾ! ಈಹೊತ್ತಿಗೆ ಮನ್ನಿಸಿದ್ದೇನೆ, ಇನ್ನು ಎಂದಾದರೂ ಇಂಥಾ ಮಾತುಗಳನ್ನು ನನ್ನ ಇದಿರಿಗೆ ನಿಂತು ಉಸುರಿ ಬಿಟ್ಟೀಯೆ ಜೋಕೆ, ನಾನಿರುವವರೆಗೆ ಈ ಗುಡ್ಲಲ್ಲೇ ಇರಬೇಕು. ಅವೆಲ್ಲಾ ನಿನ್ನ ಕಾಲಕ್ಕೆ. ನಾನು ಮರೆಯಾದ ಮೇಲೆ ನೀನು ಏನು ಮಾಡಬೇಕು ಅಂತೀಯೋ ಅವೆಲ್ಲಾ ಆಗುತ್ತೆ. ಅಷ್ಟಮಹಾಸಿದ್ಧಿಗಳೇ ನಿನ್ನ ಆಜ್ಞೆಯನ್ನು ನೋಡುವ ಕಾಲ ಮುಂದಿದೆ. ಸಧ್ಯಕ್ಕೆ ಸುಮ್ಮನಿರು. ಆವಾಗ ನನ್ನನ್ನೇನಾದರೂ ಮರೆತುಬಿಟ್ಟೀಯೆ ಜೋಕೆ!" ಎಂದು ಗುರು ಚಕ್ರವರ್ತಿಯ ವಾಕ್ಯವಾಗಲು, ಭಿಕ್ಷದಪ್ಪನವರು ಹಾಗೆಯೇ ನಡುಗಿ ಹಿಂದಕ್ಕೆ ಸರಿದರು.

ತಮ್ಮ ಮುಂದಿನ ಕಾರ್ಯಾವಲಂಬನಕ್ಕೆ ಸನ್ನದ್ಧರಾಗಿ ಸ್ಫೂರ್ತಿ ಗೊಂಡು ಮುಂದುವರಿಯಲು ಪ್ರಾರಂಭಿಸಲೆತ್ನಿಸುವ ಶ್ರೀ ಭಿಕ್ಷದ ಮಹಾ ಸ್ವಾಮಿಯವರ ವಿಶಾಲ ಹೃದಯಕ್ಕೆ ಮೆಚ್ಚಿ ಮನದಲ್ಲಿ ಹಿಗ್ಗುತ್ತಿದ್ದರು.

ಅನೇಕಾನೇಕ ಗ್ರಾಮಗಳಲ್ಲಿ ಸಂಚರಿಸಿ ಪಾದಸ್ಪರ್ಶದಿಂದ, ನೋಟ ಮಾತ್ರದಿಂದ, ವಾಕ್ಪರುಷದಿಂದ ಸಕಲರನ್ನೂ ಪವಿತ್ರರನ್ನಾಗಿ ಮಾಡುತ್ತಾ, ಮಾಯಾ ಕೋಲಾಹಲನಪ್ಪ ಅಲ್ಲಮಪ್ರಭುವಿನಂತೆ ಸ್ವಲೀಲಾವಿಲಾಸ ದಿಂದೊಪ್ಪುತ್ತಿದ್ದರು.

ಲೋಕದಲ್ಲಿ ತಾವು ಹಿಡಿದ ಪರಮವೀರ ವ್ರತಾಚಾರ ಶೀಲ ನೇಮ ಗಳಿಗೆ ವೇಳೆಯೇ ಸಾಲದಿದ್ದ ಬೆಟ್ಟದಪುರದ ಶ್ರೀ ಚಿಕ್ಕವೀರ ದೇಶಿ ಕೇಂದ್ರರು ವೀರವಿರಕ್ತರು. ಇವರು ಸಂಚರಿಸುತ್ತಿದ್ದಲ್ಲೆಲ್ಲಾ ನವಿನ್ಮಾ ಪುರಾಣ ಕರ್ತೃವಿನ ಮಹಿಮಾ ಶಕ್ತಿಯನ್ನೂ, ಪ್ರಭಾವವನ್ನೂ ಕೇಳಿದವ ರಾಗಿ ನೋಡಬೇಕೆಂಬ ಕುತೂಹಲದಿಂದ ತಮ್ಮ ಶಿವಪೂಜೆಯ ಆಧಾರ ವನ್ನು ಹೊತ್ತು ದೇವನೂರಿಗೆ ಅಭಿಮುಖವಾಗಿ ಬರುತ್ತಾ ಮಧ್ಯೆ ನಿರ್ಜನ ವಾದೊಂದು ಪ್ರದೇಶದಲ್ಲಿ ಮಧ್ಯಾಹ್ನದ ಪೂಜಾವೇಳೆ ಮೀರುತ್ತಾ, ಬಹಳ ಹಸಿವಾಗಿ ಬಂದದ್ದರಿಂದ ಆ ತಾಣವು ಕಣ್ಗೆ ತಂಪಾಗಿ, ತಿಳಿಗೊಳ ವೊಂದು ಶೋಭಾಯಮಾನವಾಗಿ ಮನಾಕರ್ಷಕವಾಗಲು, ಅಲ್ಲಿ ತಮ್ಮ ಆಧಾರವನ್ನಿರಿಸಿ ಸ್ನಾನಗೈದು, ಆನಂದವಾಗಿ ಲಿಂಗಪೂಜೆಯನ್ನು ತೀರಿಸಿ, ಒಬ್ಬರೇ ಕುಳಿತುಕೊಂಡು ತಮ್ಮಲ್ಲಿಯೇ ತಾವು ಯೋಚಿಸುತ್ತಾ ಎಲ್ಲರೂ ಗುರುಮಲ್ಲಪ್ಪ, ಗುರುಮಲ್ಲಪ್ಪ ಎಂದು ಹೇಳ್ತಾರಲ್ಲ! ನನಗೆ ಈಗ ಹಸಿ ವಾಗ್ತಾಯಿದೆ ಆ ಗುರುಮಲ್ಲಪ್ಪ ಇಲ್ಲಿ ಊಟಕಿಕ್ಕಿಸಿದರೀಗ ಮಹಿಮನೇ ಸರಿ, ಅವನೇ ಪವಾಡಪುರುಷ ಎಂದು ನಾನು ನಂಬ್ತೀನಿ: ಇಲ್ಲದೆ ಹೋದರೆ ಹ್ಯಾಗೆ ಅವನು ಮಹಾತ್ಮ? ಎಂದು ಪಕ್ಕಕ್ಕೆ ತಿರುಗಿನೋಡಲು ಯಾರೋ ಭಕ್ತ ದಂಪತಿಗಳಿಬ್ಬರು ಬುತ್ತಿಯನ್ನು ಹೊತ್ತು ಬಂದು ಕುಳಿತಿ ರುವ ಮೂರ್ತಿಗೆ ನಮಸ್ಕರಿಸಿ, ಮಹಾಸ್ವಾಮಿ, ಜಂಗಮ ದರ್ಶನವಾ ದದ್ದು ನಮ್ಮ ಪುಣ್ಯ, ಮೀಸಲು ಬುತ್ತಿಯನ್ನು ಕಟ್ಟಿ ತಂದಿದ್ದೇವೆ. ದಯ ವಿಟ್ಟು ಸಲಿಸಬೇಕು ಗುರುವೆ ಎಂದು ಕೈಮುಗಿದರು. ಆ ಕ್ಷಣವೇ ಚಿಕ್ಕ ವೀರ ದೇಶಿಕನು ರೋಮಾಂಚನಗೊಂಡು, ಹೃದಯ ಕಂಪಿಸಿ, ಪ್ರೈಬೆವರಿ, ಗದ್ಗದ ಸ್ವರದಿಂದ ಗುರುಮಲ್ಲಪ್ಪಾ ನೀನೆಂತಹ ಮಹಿಮನಪ್ಪಾ! ಸಾಕ್ಷಾತ್ ಪರಾತ್ಪರ ವಸ್ತುವೇ ನೀನಾಗಿ ಮೈದೋರಿ ಮೆರೆವ ಮನದೊಡೆ



ಬೆಟ್ಟದಪುರದ ಶ್ರೀ ಚಿಕ್ಕವೀರದೇಶಿಕೇಂದ್ರರು



ಮಲ್ಲಸಮೂಲೆ ಕಂಬಳಿಸ್ವಾಮಿಗಳು

ಯನೇ ನೀನು. ಅಹುವಹುದು ಈಗತಾನೆ ಯೋಚನೆ ಮಾಡಿದ್ದೇನೆ, ಆಗಲೇ ಪ್ರತ್ಯಕ್ಷ ಕೊಟ್ಟು ಕಳುಹಿಸಿದ್ದೀಯಲ್ಲಾ ನನ್ನಪ್ಪಾ! ಲೋಕ ಹೊಗಳಲಿಹುದೂ ಸರಿಯೇ, ನೀನಿರುವುದೂ ಸರಿಯೇ ಎಂದು ನೀವು ಯಾರಪ್ಪ? ಎಲ್ಲಿಗೆ ಹೋಗುವುದಕ್ಕೆ ಬಂದಿದ್ದೀರಿ? ಎಂದು ಆ ದಂಪತಿ ಗಳನ್ನು ಕೇಳಲು ಅದಕ್ಕವರು ನಾವು ಏನು ನೆನಸು ಮನಸಿನಿಂದ ಬಂದಿ ದ್ದೆವೆ, ಆ ಸುಕೃತದ ಭಾಗ್ಯ ನಮಗಿಂದೊದಗಿತು ತಂದೆ. ಲಿಂಗಾರ್ಪಿತ ಮಾಡಿಎಂದು ಹೇಳಿ ಬುತ್ತಿಯನ್ನು ನೀಡಿ ನಮಸ್ಕರಿಸಿದರು. ಚಿಕ್ಕವೀರೇ ಶನು ಸಂತೋಷದಿಂದ ಸಲಿಸಿ ಕರ ಜಿಹ್ವೆಗಳನ್ನು ತೊಳೆದು ತಾಂಬೂಲ ದಕ್ಷಿಣೆಯನ್ನು ಕೈಗೊಂಡು ದಂಪತಿಗಳನ್ನು ಹರಸಿ ಬೀಳ್ಕೊಟ್ಟು ಪ್ರಯಾ ಣಬೆಳಸಿದರು.

ಇತ್ತ ಗುರುಮಲ್ಲೇಶ್ವರರು ಮಠದಲ್ಲಿ ಅಡುಗೆ ಮಾಡುತ್ತಿದ್ದ ಕರೀಸ್ವಾಮಿಗಳೆಂಬುವರ ಪತ್ನಿ ಮಾದಮ್ಮನನ್ನು ಕರೆದು ಈ ದಿಸ ಅಪ ರೂಪವಾದೊಬ್ಬ ಲಿಂಗಪೂಜಾದುರಂಧರ ಜಂಗಮಮೂರ್ತಿ ಬರ್‍ತಾರೆ. ಸ್ನಾನಕ್ಕೆ ನೀರು ಕಾಸಿ ಅಚ್ಚುಕಟ್ಟಾಗಿ ಅಡುಗೆ ಮಾಡಮ್ಮ ಎಂದು ಜ್ಞಾಪಿ ಸಿದರು. ಬಳಿಯಲ್ಲಿದ್ದೋರ್ವನನ್ನು ಕರೆದು ಮಠದ ಹೊರಗೆ ಕುಲುಮೆ ಹಾಕಿಸಿ ಒಂದು ತೂತಾದ ತಪ್ಪಲೆಯನ್ನು ಅದರ ಮೇಲೆ ಇಟ್ಟು ತಿದಿ ಯೊತ್ತಿಸುತ್ತಾ, ನೆಲ್ಲೊಟ್ಟು ಇದ್ದಿಲನ್ನು ಹಾಕಿಸುತ್ತಿದ್ದ ಸಮಯಕ್ಕೆ ಶ್ರೀ ಚಿಕ್ಕವೀರೇಶ್ವರರು ಬರಲು- ಲೋ, ತಿದೀನ ಒಂದು ಸಮನಾಗಿ ಒತ್ತು ಕಾವು ಕಮ್ಮಿಯಾದರೆ ತಣ್ಣಗಾಗಿಬಿಡ್ತದೆ, ಕಾವು ಹೆಚ್ಚಾದರೆ ಕರಗಿ ಹೋಗಿಬಿಡುತ್ತದೆ, ಸರಿಯಾಗಿ ಒತ್ತು ಈ ತೂತ್ತಪ್ಪಲೆ ಬೆಸಿಬೇಕಾಗಿದೆ ಎಂದರು ಶ್ರೀ ಗುರುಮಲ್ಲೇಶ್ವರರು. ಅದು ಅರಿವಾಗಿ ಶ್ರೀ ಚಿಕ್ಕವೀರೇ ಶ್ವರರು ಅಹುದು ಗುರುವೆ ನನ್ನ ಮನವೆಂಬ ತಪ್ಪಲೆ ತೂತು ಬಿದ್ದಿದೆ, ಇದಕ್ಕೆ ಅರುಹೆಂಬ ಅರಗುವಿಟ್ಟು, ಮೆರಗುಕೊಡುವ ಚಿರಭಸಿತವೆಂಬ ಬೆಸುಗೆಯಂ ಬೆಸೆದು, ಪರಾತ್ಪರ ವಸ್ತುವೆಂಬ ಕುರುಹನಿರವೆರಕವಿಟ್ಟೆಸಹ ನನ್ನ ಗುರುವಿನ ಪರಮಗುರು ನೀನೇ ನೀನೇ ಎಂದು ನಮಸ್ಕರಿಸಲುಜ್ಜು ಗಿ ಸುವಷ್ಟರಲ್ಲೇ ಮೊದಲು ಗುರುಮಲ್ಲೇಶ್ವರರು ತಾನೇ ನಮಸ್ಕರಿಸಿ ತಬ್ಬಿ

ಕೊಂಡು ಒಳಗಡೆ ಹೋಗಿ ಸ್ನಾನ ಶಿವಾರ್ಚನೆಗೈಸಿ ಪ್ರಸಾದ ಸ್ವೀಕಾರ ವಾದಮೇಲೆ ತಾವಿಬ್ಬರೇ ಎರಡುಮೂರು ಗಂಟೆಗಳ ಕಾಲ ಅನುಭವಾ ಮೃತ ಸುಧಾಸಾಗರದಲ್ಲೋಲಾಡಿ ಹೊರಗೆ ಬಂದನಂತರ ಶ್ರೀ ಚಿಕ್ಕವೀರೇ ಶ್ವರರು ಸದಾ ದಾಸೋಹಂ ಭಾವ ನೆಲೆಗೊಂಡು ತಮ್ಮ ಆಚಾರ ವ್ರತ ಶೀಲ ನಿಯಮಗಳನ್ನೆಲ್ಲಾ ಸಂಕ್ಷಿಪ್ತಗೊಳಿಸಿಕೊಂಡರು. ಹೀಗೇ ನೇ ಮಲ್ಲನಮೂಲೆ ಕಂಬಳಿಸ್ವಾಮಿಗಳವರು, ಕಲ್ಲುಬುರುಗಿ ಶ್ರೀಗಳವರೂ ಇನ್ನೂ ಮುಂತಾದವರು ತಮ್ಮ ತಮ್ಮ ನೆಲೆಯನ್ನು ಬೆಸಗೊಂಡು ಹೋಗಿ ದ್ದಾರೆ.

ಮತ್ತೊಂದು ದಿನ ಭಕ್ತಸಮೂಹದಲ್ಲಿ ಕುಳಿತಿದ್ದ ಶ್ರೀ ಗುರು ಸ್ವಾಮಿಯವರು ಈ ಹೊತ್ತು ಒಬ್ಬ ದೊಡ್ಡ ದಾಸ ಬರ್ತ್ತಾನೆ ಕಣ್ರೋ! ಎಂದು ಹೇಳಿ ಮಾತಾಡುತ್ತಿರುವಷ್ಟರಲ್ಲಿಯೇ ಗಾಡಿಗೊಂಬೆಯ ಆಕಾರ ದೆತ್ತರ, ಅಷ್ಟೇ ದಪ್ಪಉಳ್ಳ ಆಜಾನುಬಾಹು, ಶಂಖು ಜಾಗಟೆಗಳನ್ನು ಕೈಯ್ಯಲ್ಲಿ ಹಿಡಿದು, ಕಣಜ ಕುಕ್ಕೆಯನ್ನು ಕಕ್ಷೆಯಲ್ಲಿ ತಾಳ್ದವನಾಗಿ ತುಳಸೀ ಮಣಿಗಳನ್ನು ಕೊರಳಲ್ಲಿ ಮಾಲೆ ಹಾಕಿ, ಎರಡೆರಡು ಬೆರಳಗಲ ನಾಮಗಳು ಮೂರೂ ಒಂಭತ್ತು ಅಂಗುಲ ಉದ್ದವಾಗುಳ್ಳವು, ಇಂಥ ಸ್ಥೂಲಕಾಯನು ಸಮ್ಮುಖಕ್ಕೆ ಬಂದು ನಿಂತು, ಶರಣು ಶರಣು ಶರಣಾಗತ ರಕ್ಷ ಚೂಡಾಮಣಿ! ಕರುಣಾಳು! ನಮಸ್ತೆ ನಮಸ್ತೆ ಶಿವಧೋ! ಶಿವನೇ ನಾರಾಯಣ ಗೋವಿಂದ ಗೋವಿಂದಾ ಎಂದು ಶಂಖವನ್ನು ಹಿಡಿದು ಭಂ ಭಂ, ಭಂ, ಎಂದೂದಿ ಪರತರ ಪರಂಜ್ಯೋತಿ ಸ್ವರೂಪನ ಚರಣಾರವಿಂದ ಗಳ ಸಂದರ್ಶನಕ್ಕಾಗಿ ಬಂದ ದಾಸಾನುದಾಸ ನಾನು ಮಹಾಪ್ರಭೋ ಎಂದು ದೀರ್ಘದಂಡ ನಮಸ್ಕಾರ ಗೈಯಲು, ಸ್ವಾಮಿಯು ಆತನ ಯೋಗಕ್ಷೇಮವನ್ನು ವಿಚಾರಿಸಿ ಬಗೆ ಬಗೆಯ ಭಕ್ಷ್ಯಾದಿಗಳಿಂದ ಮಾಡಿಸಿದ ಅಡುಗೆಯನ್ನು ಯಥೇಚ್ಛವಾಗಿ ಉಣಬಡಿಸಲು, ತೃಪ್ತನಾದ ಆ ಅನಿರೀಕ್ಷಿತ ದಾಸನು ಮತ್ತೆ ನಿಂತು ಸಂತೋಷದಿಂದ ಓಂಕಾರ ನಾದ ಮಯ ಶಂಖವನ್ನು ಬಿಡದೆ ಒಂದುಘಂಟೆ ಊದಿದನು. ಊದಿದ ಶಬ್ದ ನಾಲ್ಕೈದು ಮೈಲಿ ದೂರದವರೆಗೂ ಹಾದುಹೋಗಿ ಜನರ ಕಿವಿಯಲ್ಲೆಲ್ಲಾ

ಬಡಿಮ ಅತ್ಯಾಶ್ಚರ್ಯಗೊಳಿಸಿತು. ನೆರೆದಿದ್ದವರೆಲ್ಲಾ ಬೆರಗಾದರು. ಈ ದೃಶ್ಯವು ಹಿಂದೆ ಹರನ ಕರಧೃತ ಬ್ರಹ್ಮಕಪಾಲಕ್ಕೆ ತನ್ನ ಹಣೆಯ ನೆತ್ತರೆರೆದು ಮಮಕರ್ತ ಮಹೇಶ್ವರ ನಮೋ ನಮೋ ಎಂದು ಮರೆ ಹೊಕ್ಕು ಮೆಚ್ಚುಗೆ ಪಡೆದ ಹರಿಯಂತೆ ಕಾಣಿಸುತ್ತಿತ್ತು. ಬಂದಿದ್ದ ದಾಸೇಶ್ವರನು ಅಂದು ಗುರುಮಲ್ಲೇಶ್ವರ ಮಹಾಸ್ವಾಮಿಯ ಪ್ರೀತಿಗೆ ಪಾತ್ರನಾಗಿ ಅಪ್ಪಣೆಗೊಂಡು ತೆರಳಿದನು. ಅತ್ತ ಅವನು ಹೋಗಲು ಇತ್ತ ಕರ್ತನು ಸಮ್ಮುಖದಲ್ಲಿದ್ದವರನ್ನು ಈಗ ಬಂದಿದ್ದವನಾರೆಂಬುದನ್ನು ಯಾರು ಗುರ್ತಿಸಿದರೋ ? ಅಯ್ಯೋ ದಡ್ಡರು ಕಣ್ರೋ ನೀವು, ಅವನೇ ಪಟ್ಟಣದ ರಂಗಸ್ವಾಮಿ, ಈ ಗುರುಮಲ್ಲಯ್ಯನನ್ನು ನೋಡವುದಕ್ಕಾಗಿಯೇ ಬಂದಿದ್ದನು, ಎಂದು ನುಡಿಯಲು ಎಲ್ಲರೂ ಸ್ತಬ್ಧರಾದರು. (ಬಿಳಿಗಿರಿ ರಂಗಸ್ವಾಮಿ ಎಂದು ಕೆಲವರು ಹೇಳುವರು)

ಇಂತೀ ಪರಿಯಲಿ ತಮ್ಮ ಭಕ್ತಸಮೂಹಕೆ ಬಂದು ಹೋದವರ ಪರಿಚಯವನ್ನು ತೋರಿಕೊಡುತ್ತಾ ಪಾರಮಾರ್ಥಿಕ ಪರಮಾನುಭವವನ್ನು ಕರತಲಾಮಲಕಮಾಡಿ, ಮನದಣಿಯೆ ಬೋಧಿಸುತ್ತಾ ಸುಖ ಶಾಂತಿಗಳನ್ನಿತ್ತು ಸಲಹುತ್ತಾ ಒಪ್ಪಿರ್ದ ಗುರುಕುಲ ಲಲಾಮನು ಇನ್ನೀ ಲೋಕಯಾತ್ರೆ ಸಾಕು ಮರೆಯಾಗಿ ಕುಳಿತುಬಿಡುವುದು ಒಳಿತೆಂದು ಹೇಳಿ ಸ್ನಾನ ಶಿವಪೂಜೆಯನ್ನು ಮುಗಿಸಿ ಊಟವನ್ನು ಬಿಟ್ಟು ಶರೀರಕ್ಕೆ ಸ್ವಸ್ಥವಿಲ್ಲವೆಂದು ಮಲಗಿದರು.

ಮತ್ತೊಬ್ಬರು ಲೀಲಾಮೂರ್ತಿಗಳು, ನಿರಾಭಾರಿ ಜಂಗಮರು ಉಂಡುಂಡೆಸ್ವಾಮಿ ಎಂಬುವರಿದ್ದರು. ಇವರು ಸಾಮಾನ್ಯರಲ್ಲ, ದೊಡ್ಡವರೆಂದು ಗುರುಸ್ವಾಮಿಯವರೇ ಭಕ್ತರಿಗೆ ಹೇಳುತ್ತಿದ್ದರು. ಅವರು ಬಂದು ಗುರುಮಲ್ಲಪ್ಪಾ ! ಗುರುಮಲ್ಲಪ್ಪಾ ! ಏನು ಹೋಗಿಬಿಡ್ತೀಯಾ ? ಹೋಗಿಬಿಡ್ತೀಯಾ ಗುರುಮಲ್ಲಪ್ಪಾ ? ಎನ್ನುವುದಂತೆ, ಆಹುದು ಗುರುವೆ ಶರೀರಕ್ಕೆ ಸ್ವಸ್ಥವಿಲ್ಲ. ಹೋಗಬಾರದೆ ? ಸಾಕಲ್ವೆ ? ಎಂದು ಗುರುಸ್ವಾಮಿಯವರು ನುಡಿಯಲು, ಆಗೋದಿಲ್ಲ ಇನ್ನೂ ಸ್ವಲ್ಪ ದಿನ ಇರಬೇಕು.

ಮಾಡಬೇಕಾದ್ದು ಇನ್ನೂ ಇದೆ, ಔಷಧಿ ತೆಕ್ಕೊ 'ಔಷಧಿಯ, ಎನ್ನಲು ಹಾಗಾದರೆ ಸ್ವಾಮಿ, ನೀವೇ ಔಷಧಿ ತೆಕ್ಕೊಂಡರೆ ಸಂಗೆ ಗುಣವಾಗುತ್ತೆ, ಆರೋಗ್ಯವಾಗ್ತೀನಿ ಎಂದವರು ತುಪ್ಪ, ಸಕ್ಕರೆ, ಕುಂಕುಮಕೇಸರಿ ಹಾಕಿ ಹಾಲನ್ನು ಕಂಪಾಗಿ ಕಾಸಿ ಹೆಚ್ಚಾಗಿ ಕುಡಿಸಿಬಿಟ್ಟು ಈ ಸಾರಿ ಹುಷಾ ರಾದೆನೆಂದೆದ್ದು, ಸ್ನಾನ ಲಿಂಗಾರ್ಚನೆ ಮಾಡಿ ಪ್ರಸಾದ ಸೇವಿಸಿ ಮತ್ತೊಂದಿ ನಂತೆ ಭಕ್ತಾನುಗ್ರಹಾದಿ ಕಾರ್ಯ ಪ್ರವಾಸಗಳನ್ನು ಕೈಕೊಂಡು ಕೆಲವಾರು ವರ್ಷಗಳನ್ನು ನಡೆಸಿದರು.

ಇಂತು ಭಕ್ತಮಾಹೇಶ್ವರರ ಸಂಶಯ ಸಂಕಲ್ಪಗಳನ್ನೆಲ್ಲಾ ನಿವಾರಣೆ ಮಾಡಿ ಪಾರಮಾರ್ಥಿಕ ಸುಖ ಸಂತೋಷಗಳು ಚಿರಸ್ಥಾಯಿಯಾಗಿರುವಂತೆ ಸುಭದ್ರಗೊಳಿಸಿ, ಅಭಿನ್ನ ಪರಮಲಿಂಗಾಂಗ ಸಾಮರಸ್ಯದ ನೆಲೆವೀಡಾದ ಶ್ರೀ ಶ್ರೀ ಭಿಕ್ಷದಪ್ಪನವರ ನಿರ್ಮಲ ಹೃದಯನಿವಾಸರಾಗಿ ಶಾಲೀವಾಹನ ಶಕ ೧೮೨೧ ನೇ ವಿಕಾರಿ ನಾಮಸಂವತ್ಸರದ ಜೇಷ್ಠಮಾಸ ಕೃಷ್ಣ ಶದಿಗೆ ಸೋಮವಾರ ಅಂದರೆ ತಾರೀಖು 25-6-1899 ರಂದು ಲಿಂಗೈಕ್ಯ ರಾದರು. ದೇವನೂರಿನ ಜನತೆ ಎಲ್ಲಾ ಶೋಕಾಬ್ಧಿಯಲ್ಲಿ ಮುಳುಗಿತು. ಎಲ್ಲೆಲ್ಲಿ ಸ್ವಾಮಿಯವರ ಶಿಷ್ಯರಿದ್ದರೋ ಅಲ್ಲೆಲ್ಲಾ ಈ ವಾರ್ತೆ ತಿಳಿದು ಜನರೆಲ್ಲಾ ಗಾಬರಿಯಾಗಿ ಬಂದು ನೆರೆದು ಗೋಳಿಟ್ಟು ಹೊರಳಾಡಿದರು. ಭಕ್ತವೃಂದದ ದುಃಖಕ್ಕೆ ಪಾರವೇ ಇಲ್ಲವಾಯಿತು. ಎಲ್ಲರೂ ತಮ ತಮಗೆ ಸಮಾಧಾನ ತಂದುಕೊಂಡು ಲಿಂಗಶರೀರವನ್ನು ಶೃಂಗಾರವಾದ ಮಂಟಪಕ್ಕೆ ತಳಿರು ತೋರಣ ಪರಿಮಳ ಪತ್ರೆ ಪುಷ್ಪಗಳಿಂದಲಂಕರಿಸಿ, ಕೂಡಿಸಿ ಅಸಂಖ್ಯ ಭಕ್ತಮಾಹೇಶ್ವರರ ಸಂದಣಿಗೂಡಿ ಬಹಳ ವಿಜೃಂ ಭಣೆಯಿಂದ ಭಜನೆ, ಕೀರ್ತನೆ, ಜಯಘೋಷ, ವಾದ್ಯಸಹಿತ ಮೆರೆವಣಿಗೆ ಗೈದು, ಈ ಹಿಂದೆಯೇ ಶ್ರೀಮತಿ ಶಂಕರಮ್ಮಯ್ಯನು ಊರಿನ ಪಶ್ಚಿಮ ದಿಶೆಯಲ್ಲಿ ಗುರುಗಳಿಗೆ ದಾನವಾಗಿ ಸಮರ್ಪಿಸಿ ಘನಲಿಂಗ ಚಕ್ರ ವರ್ತಿ ಮುಪ್ಪಿನ ಮಹಾಸ್ವಾಮಿಗಳವರನ್ನು ನಿಕ್ಷೇಪಿಸಿ ನಿರ್ಮಿಸಿದ್ದ ಹೂದೋಟದಲ್ಲಿ ಕ್ರಮವಾಗಿ ಸಮಾಧಿಕ್ರಿಯೆಯನ್ನಾಚರಿಸಿ ಪವಿತ್ರ ಗದ್ದುಗೆಯನ್ನು ರಚಿಸಿದರು. ಪೂಜ್ಯ ಗದ್ದುಗೆಯ ಮೇಲೆ ನಿಲ್ಲಿಸಿದ



ಶ್ರೀ ಗುರುಮಲ್ಲೇಶ್ವರರ "ಗದ್ದಿಗೆ"



ಶ್ರೀ ಗುರುಮಲ್ಲೇಶ್ವರರ ಗದ್ದಿಗೆಯ "ಬಾಗಿಲು"

ಜಂಗಮಮೂರ್ತಿಯ ಪಾದಾರವಿಂದಗಳನ್ನು ನೆರೆದಿದ್ದ ಭಕ್ತಮಾಹೇಶ್ವರರೆಲ್ಲರೂ ತಮ್ಮ ಕಂಗಳಾಶ್ರುಜಲದಿಂದ ಪ್ರಕ್ಷಾಲಿಸಿದಂತೆ ಪೂಜೆಗೈದು ಮಂಗಳಾರತಿಯನ್ನು ಬೆಳಗಿ ಜಯ ನಮಃ ಪಾರ್ವತೀಪತೇ ಹರಹರ ಮಹಾದೇವ! ಅಲಕ್ ನಿರಂಜನ ಗುರುಮಲ್ಲೇಶ ಮಹಾಪ್ರಭೋ! ಎಂದು ಜಯಘೋಷ ಮಾಡಿದರು.

ಈ ಆರಭ್ಯ ಇಲ್ಲಿಯೇ ನಿತ್ಯ ತ್ರಿಕಾಲದಲ್ಲಿಯೂ ಗದ್ದುಗೆಯ ಪೂಜೆ, ನೈವೇದ್ಯ, ಗುರುಲಿಂಗ ಜಂಗಮ ದಾಸೋಹ ನಡೆಯಲು ಪ್ರಾರಂಭವಾಯಿತು. ಇದಕ್ಕೆಲ್ಲಾ ಷಡ್ಡುಗಳನ್ನು ನಿರ್ಮಿಸಿದರು. ನಿರಾಯಾಸದಿಂದ ಹನ್ನೆರಡು ದಿವಸ ಹರ ಗುರು ಚರಮೂರ್ತಿಗಳ ಪಾದಪೂಜೆ, ಜಂಗಮೋತ್ಸವ, ಮಹಾಗಣಾರಾಧನೆಗಳು ಭವ್ಯವಾಗಿ ಜರುಗಿದುವು. ಅಂದಿನಿಂದ ಅಲ್ಲೇ ಮಠವನ್ನು ಸ್ಥಾಪಿಸಿದರು; ಸಾಮಾನ್ಯ ಮರ ಮುಟ್ಟುಗಳಿಂದ ಕಟ್ಟಡಕ್ಕೆ ಪ್ರಾರಂಭಿಸಿದರು. ಶ್ರೀ ಭಿಕ್ಷದಸ್ವಾಮಿಯವರು ಕಂಥೇಭಿಕ್ಷದ ಕಾಯಕಾಚರಣೆ, ದಾಸೋಹ, ಕಟ್ಟಡ ಮುಂತಾದ ಕಾರ್ಯಗಳಲ್ಲಿ ನಿರತರಾದರು. ಕಿನಕಳ್ಳಿ ಶರಣಬಸಪ್ಪತಾತನವರು ಉಗ್ರಾಣ ಮುಂತಾದ ಯಜಮಾನಿಕೆ ನಡೆಸಲು ಆರಂಭಿಸಿದರು. ದೇವನೂರಿನ ಬಹಳ ವಯಸ್ಸಾದ ಓರ್ವ ವಡೇರಾಮಯ್ಯನ ಸಿದ್ದಪ್ಪ ಎಂಬುವರು ಶ್ರೀಗಳವರ ಗದ್ದುಗೆಯ ಪೂಜಾಕಾರ್ಯವನ್ನು ಕೆಲವು ದಿನ ಮಾಡಿದರು. ಅನಂತರ ಶ್ರೀ ಚನ್ನಬಸಪ್ಪಸ್ವಾಮಿಗಳೆಂಬುವರು ಶ್ರೀ ಗದ್ದುಗೆಯ ಪೂಜೆಯನ್ನು ಮಾಡಲಾರಂಭಿಸಿದರು.



## ಅಧ್ಯಾಯ ೭

ನಮ್ಮ ಕರ್ತೃ ಶ್ರೀ ಗುರುಮಲ್ಲೇಶ್ವರರನ್ನು ಮೈಸೂರಿನಲ್ಲಿದ್ದಾಗಲೇ ಆಶ್ರಯಿಸಿಕೊಂಡು ಕೆಲವು ದಿನವಿದ್ದು ಬಳಿಕ ಅವರು ದೇವನೂರಿಗೆ ಬಂದಮೇಲೆ ಪತ್ನಿಯನ್ನು ಕಳೆದುಕೊಂಡ ಬಾಳಪ್ಪಶೆಟ್ಟರೆಂಬ ಅನಾಥ ಭಕ್ತರೊಬ್ಬರು ತಮ್ಮೆರಡು ಹೆಣ್ಣುಮಕ್ಕಳ ಸಹಿತ ಶ್ರೀ ಗುರುಗಳ ಹತ್ತಿರಕ್ಕೆ ಬಂದು ಕೆಲವು ದಿನವಿದ್ದು ತನ್ನವಸಾನಾಂತ್ಯದಲ್ಲಿ ಗುರುವೆ, ನನ್ನ ಜೀವಿತವಿಲ್ಲಿಗೆ ಮುಗಿಯಿತು, ಈ ನಿರ್ಗತಿಕರಾದ ಹೆಂಗೂಸುಗಳನ್ನು ನಿಮ್ಮ ಮಕ್ಕಳೆಂದೇ ಭಾವಿಸಿ ಇವಕ್ಕೆ ಮುಂದಣ ಗತಿ ಪಥಗಳನ್ನು ಕಾಣಿಸಿಬಿಡಿರಪ್ಪಾ ಎಂದು ಬಿನ್ನೈಸಲು ಶ್ರೀ ಗುರುಮಲ್ಲೇಶ ದಯಾಮಯನು, ನೀನು ಮೊದಲು “ ಶಿವ ಶಿವಾ ” ಎಂದು ನಿನ್ನ ಗತಿಪಥವನ್ನು ಸರಿಪಡಿಸಿಕೊ, ಅವಕ್ಕೆ ಶಿವನಿದ್ದಾನೆ ನೋಡಿಕೊಳ್ಳುತ್ತಾನೆ ಎಂದು ಅಭಯ ಕೊಟ್ಟನು. ಆತ ಶಿವೈಕ್ಯನಾಗುತ್ತಲೂ ಒಬ್ಬಳನ್ನು ಉತ್ತರದ ಕಡೆ ಒಬ್ಬಯ್ಯನಿಗೆ ಲಗ್ನಮಾಡಿ ಕಳುಹಿ ಮತ್ತೊಬ್ಬಳನ್ನು ಕುದೇರು ಕಂಬಿ ಸಿದ್ಲಿಂಗಪ್ಪನವರಿಗೆ ಕೊಟ್ಟದ್ದಿತು. ಇವರಿಗೆ ಚನ್ನಬಸಪ್ಪನೆಂಬ ಮಗನುದಿಸಿದ್ದರು. ದೇವನೂರು ಶ್ರೀ ಗದ್ದಿಗೆ ಪೂಜಾಕರ್ತವ್ಯವು ಪಡೇರಾಮಯ್ಯನ ಸಿದ್ಧಪ್ಪನಿಂದಾಗದಿರಲು ಈ ಚನ್ನಬಸಪ್ಪಸ್ವಾಮಿಗಳನ್ನು ನಿಯಮಿಸಿದ್ದರು. ಇದು ಇನಿದಾದ ಸುಮಧುರದ ಸವಿಯೀವ ಫಲದ ಪರತತ್ವಮೂರ್ತಿ ಶ್ರೀ ಗುರುಮಲ್ಲೇಶನೆಂಬ ಕೋಮಲವೃಕ್ಷವನ್ನು ವಿಷಯರಸಪೂರ್ಣವೆಂಬ ವಿಷಯ ಮುಳ್ಳಿನ ಬಳ್ಳಿಯು ಮೊಳೆತು ಆಶ್ರಯಿಸಿದಂತೆಯೂ, ಮಾಯೆ ಪ್ರಭುವನ್ನು ಬೇಟಗೊಂಡಂತೆಯೂ ಆಯಿತಲ್ಲದೆ ಸಮಯ ಕಾದು ಮುಸುಕಿಬಿಡೋಣವೆಂದು ಹೊಂಚುಹಾಕುವ ದೀಪದಡಿಯ ಕತ್ತಲೆಯಂತೆಯೂ ಆಯಿತು !

ಕ್ರಿ. ಶ. 1899 ರವರೆಗೂ ಇಲ್ಲದಿದ್ದ ಹೆಂಡಿರು ಮಕ್ಕಳುಗಳು ಅಲಕ್ನಿರಂಜನ ಶ್ರೀ ಗುರುಮಲ್ಲೇಶ ಮಹಾಪ್ರಭುವಿಗೆ ಇಲ್ಲಿಂದ ತೊಡಗಿದರು !

ಯಾಕೆಂದರೆ ನವರತ್ನ ಖಚಿತವಾದ ಅವರ ಉಡುಗೆ ತೊಡುಗೆಯಾಭರಣ ಗಳಿಗಾಗಿ. ಮೇಲೆ ಹೇಳಿದ ಚನ್ನಬಸಪ್ಪಸ್ವಾಮಿಗಳು, ನಾನು ಗುರು ಮಲ್ಲಪ್ಪನವರ ದೌಹಿತ್ರ (ಮಗಳ ಮಗ ಅಂದರೆ ಮೊಮ್ಮಗ) ನೆಂಬುದಾಗಿ, ಹಿಂದೆ ಹೇಳಿದ ಗುರುರಾಮಪ್ಪನವರು–ನಾನು ದತ್ತುಮಗನೆಂದೂ, ಮತ್ತೊಬ್ಬ ಸೇವೆಗಾಗಿ ಆಶ್ರಯಿಸಿಕೊಂಡು ಬಂದವನು ಕೆರಹಟ್ಟಿ ಕುದುರೆ ಸಿದ್ಧಪ್ಪನೆಂಬುವನು-ನಾನು ಗುರುಮಲ್ಲೇಶ್ವರರ ಸಾಕುಮಗ ಅಂತ, ಹೀಗೆ ಉರಿಯ ಪುತ್ಥಳಿಗೆ ಅರಗಿನ ಆಭರಣವಿಡುತ್ತಾ ತರಗೆಲೆಯ ಉಡುಗೊರೆಯನುಡಿಸುತ್ತಾ ಹೇಗೋ ತನ್ನೂರಿಗೆ ಒಡೆಯನ ಉಡುಗೆ ತೊಡುಗೆಗಳನ್ನು ಸಾಗಿಸಿಕೊಂಡು ಹೋಗಿದ್ದನಂತೆ. ಪ್ರಾಣಲಿಂಗವನ್ನು ಕೇಳಿ ತರಲು ಹೋದ ರಾವಣನು ಕೈಲಾಸದಲ್ಲಿ ಶಿವೆಯನ್ನೆ ಕೊಡೆಂದು ಶಿವನಿಂದ ಪಡೆದುಬಂದು ಲಂಕೆಯಲ್ಲುಳುಹಿಕೊಂಡನೆ? ಅಂತು ಅವೆಲ್ಲಾ ಸನ್ನಿಧಿಗೆ ಬಂದುಳಿದುವು.

ಏಳನೂರು ವರುಷ ಕಾಯುಗೊಂಡಿದ್ದ ಶಿವಾಭಿನ್ನ ಮಹಾಯೋಗ ಪುರುಷರೂ, ಯಾವಾಗಲೂ ಅಂತರ್ಲಕ್ಷ್ಯದಲ್ಲೇ ಪರವಶರಾಗಿದ್ದವರೂ ಆದ ಚಳ್ಳಗುರ್ಕಿ ಎರ್ರಿಸ್ವಾಮಿಗಳವರು–ಗುರುಸ್ವಾಮಿಯವರು ಲಿಂಗೈಕ್ಯರಾದಮೇಲೆ ಎಷ್ಟೋ ದಿನದ ಮೇಲೆ ಲಿಂಗೈಕ್ಯರಾದವರು. ಇವರೇನೆ, ಗುರುಮಲ್ಲೇಶ್ವರರೆಂದರೆ ಉಪಮಾತೀತರು, ಅಸಾಧ್ಯ ಪುರುಷರು, ಮಹಾಮಹಿಮರು, ಅವರ ಲಿಂಗಪೂಜೆಗೆ ಪತ್ರೆ ಪುಷ್ಪಗಳನ್ನು ನಾನೆತ್ತಿ ತಂದು ಕೊಡುತ್ತಿದ್ದವನಪ್ಪಾ ಎಂದು ಹೇಳುತ್ತಿದ್ದರಂತೆ. ಅಂದಬಳಿಕ ಗುರುಮಲ್ಲೇಶ್ವರರ ನಿಲುವು ವಯೋಮಿತಿಗಳನ್ನು ಪರಿಗಣಿಸಬಲ್ಲವರಾರು? ಇವೆಲ್ಲವೂ ಸ್ವಾರ್ಥಸಾಧನೆಯ ಮಹಾ ದುಷ್ಪ್ರಯತ್ನಗಳು.

ಈ ರೀತಿ ಕಲ್ಪಿಸಿಕೊಂಡು ಚನ್ನಬಸಪ್ಪಸ್ವಾಮಿಗಳು ಗದ್ದುಗೆಪೂಜೆ ಮತ್ತು ಶಿಷ್ಯಾರ್ಜನೆಯನ್ನೂ ಸ್ವಲ್ಪಸ್ವಲ್ಪವಾಗಿ ಮಾಡುತ್ತಾ ಬಂದರು. ಶ್ರೀ ಭಿಕ್ಷದ ಸ್ವಾಮಿಗಳವರು ಮಾತ್ರ "ಮೇಲಾಗನೊಲ್ಲೆನು ಕೀಳಿರುವೆನಲ್ಲದೆ, ಕೀಳಿಂಗಲ್ಲದೆ ಹಯನ ಕರೆವುದೆ, ಅರಸರ ಮನೆಯ ಬಡತಿಯಾಗಿಹುದಕ್ಕಿಂತಲೂ ಗುರುಲಿಂಗ ಜಂಗಮರಿಗೆ ತೊತ್ತಾಗಿಹುದು ಕರಲೇಸು

ಕಂಡಯ್ಯಾ" ಎಂಬ ಪುರಾತನರ ನುಡಿಯಂತೆ ಸೇವಾ ಸಾಗರದಲ್ಲಿರುತ್ತಿದ್ದರು. ಈ ಎಲ್ಲಾ ಕಾಂಕ್ಷಿತರಿಂದ ಮಠದ ವ್ಯವಸ್ಥೆ ಬೆಳೆದಂತೆಲ್ಲಾ ಲೌಕಿಕ ಪಾರಮಾರ್ಥವೆರಡೂ ಏಕೈಕವಾಗಿ ವೃದ್ಧಿ ಹೊಂದಲು ಮೊದಲಾಯಿತು. ಬೇಟಗೊಂಡ ಮಾಯೆ ಮೋಹದಿಂದ ಪ್ರಭುವನ್ನೇ ಹಿಂಬಾಲಿಸಿದಂತೆ, ಹೊಂಚು ಹಾಕುತ್ತಿದ್ದ ದೀಪದಡಿಯ ಕತ್ತಲೆಗೆ ಗಾಳಿ ಪೋಷಕವಾದಂತೆ ಶ್ರೀಮತಿ ಶಂಕರಮ್ಮನವರನ್ನು ಶ್ರೀ ಉಂಡುಂಡೆಸ್ವಾಮಿಗಳು ಗದ್ದುಗೆಪೂಜೆ ಮಾಡ್ತಾನಲ್ಲ ಚನ್ನಬಸಪ್ಪ: ಪಾಪ ಸಂಸಾರೀಕ, ನಾಳೆ ಅವನ ಮಕ್ಕಳು ಮರಿಗೇನೂ ಆಧಾರ ಬೇಡ್ವೇನಮ್ಮಾ? ಏನಾದರೂ ಒಂದು ಅಲ್ಪ ಸ್ವಲ್ಪ ಬರಕೊಡು ಎಂದು ಒತ್ತಾಯ ಪಡಿಸತೊಡಗಿದ್ದರು. ಅದಕ್ಕೆ ಶಂಕರಮ್ಮನು, ನಮ್ಮ ಗುರುಗಳು ಬಿಳೀ ಕಾಗದದ ಮೇಲೆ ಕರೀ ಕಪ್ಪು ಹತ್ತಿಸಬೇಡ ಶಂಕರಮ್ಮಾ! ಪಟವೇರೋ ಹಾಗೆ ಏರಿಬಿಡುತ್ತೆ ಎನ್ನುತ್ತಿದ್ದರು ಬುದ್ಧಿ, ಬೇಡಿ ಸುಮ್ನಿರಿ ಎನ್ನಲು, ಕೇಳದೆ ಮತ್ತೆ ಮತ್ತೆ ಹೆಚ್ಚಾಗಿ ಪೀಡಿಸ ತೊಡಗಲು ಈ ಕೋಟಲೆಯನ್ನು ತಾಳಲಾರದೆ "ನಮ್ಮ ಗುರುಗಳ ಗದ್ದಿಗೆ ಮುಂಭಾಗದಲ್ಲಿರುವ ಆರು ಅಂಕಣ ಹೆಂಚಿನ ಮನೆಯಲ್ಲಿ ನೀವು ವಾಸವಾಗಿದ್ದುಕೊಂಡು ನಿಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ಕ್ರಮದಿಂದ ಗದ್ದುಗೆಪೂಜೆ ಮಾಡಬಹುದೆಂದು ಬಲವಂತಕ್ಕೊಳಗಾಗಿ ದಾನಪತ್ರ ಬರೆದುಕೊಟ್ಟರು. ಇಷ್ಟಕ್ಕೇನೆ ನಂಜುಮುಳ್ಳಿನ ಬಳ್ಳಿ ಪರತತ್ವ ವೃಕ್ಷದಮೇಲೆ ಕವಲು ಕವಲಾಗಿ ಹರಿದು ಲೋಕರಂಜನೆಯಾಗಿ ಹಬ್ಬಲು ಅವಕಾಶವಾದಂತೆಯೂ, ಮೋಹಗೊಂಡು ಹಿಂಬಾಲಿಸಿದ ಮಾಯೆ ಪ್ರಭುವನ್ನು ಸೂರೆಗೊಳ್ಳದೆ ಬಿಡೆನೆಂದು ಹಠದಿಂದ ಕಂಕಣ ಬದ್ಧಳಾದಂತೆಯೂ, ಗಾಳಿಪೋಷಕವಾದ ಕತ್ತಲೆಗೆ ಪರಾಕ್ರಮ ಆವಿರ್ಭವಿಸಿದಂತೆಯೂ ಚನ್ನಬಸಪ್ಪಸ್ವಾಮಿಗಳಿಗೆ ಬಸವಣ್ಣ, ನೀಲಮ್ಮನೆಂಬ ಇಬ್ಬರು ಮಕ್ಕಳಿದ್ದರು. ಭಕ್ತಾನುಗ್ರಹ ವಿಷಯದಲ್ಲಿ ಕೆಲವುಜನ ಭಕ್ತಾಗ್ರಣ್ಯರಿಗೆ ಸಂಸಾರಸ್ಥ ಚನ್ನಬಸಪ್ಪಸ್ವಾಮಿಗಳ ಗುರುತ್ವವು ಹಿಡಿಸದೆ ಶರಣರಲ್ಲಿ ಶರಣರಾಗಿ ನಿಸ್ಪೃಹತೆಯಿಂದ ಮಠದ ಕೆಲಸ ಕಾರ್ಯದಲ್ಲಿ ನಿರತರಾಗಿದ್ದ ಶ್ರೀ ಭಿಕ್ಷದಾರ್ಯ ಮಹಾಸ್ವಾಮಿಯವರನ್ನೇ ಗುರುತ್ವಾಧಿಕಾರಕ್ಕೆ ಹೆಚ್ಚಾಗಿ ಒತ್ತಾಯ ಪಡಿಸತೊಡಗಿದರು. ಭಕ್ತರ ಆಶೆಯನ್ನು

ಅತಿಕ್ರಮಿಸಲಾರದೆ ಪ್ರಪ್ರಥಮವಾಗಿ ಶ್ರೀ ಭಿಕ್ಷದಪ್ಪನವರು ತೊಟ್ಟವಾಡಿ ಶ್ರೀ ಸಿದ್ಧಮಲ್ಲಿಕಾರ್ಜುನ ದೇವರು ಮತ್ತು ದೇವನೂರು ಶ್ರೀಲವಂತ ಮಲ್ಲಯ್ಯಶೆಟ್ಟರು ಎಂಬಿಬ್ಬರಿಗೆ ಕಟಾಕ್ಷವಿತ್ತರು. ಈ ಸಿದ್ಧಮಲ್ಲಿಕಾರ್ಜುನ ದೇವರನ್ನೇ ಸೋಮಹಳ್ಳಿ ಶಿಲಾಮಠಕ್ಕೆ ಪಟ್ಟಾಧ್ಯಕ್ಷರನ್ನಾಗಿ ಮಾಡಿದರು-ಮೋಕ್ಷದಪ್ಪ ನಮ್ಮ ಭಿಕ್ಷದಪ್ಪನವರು. ಇಷ್ಟನ್ನೂ ಸೈರಿಸಲಾರದೆ ಶ್ರೀ ಚೆನ್ನಬಸಪ್ಪಸ್ವಾಮಿಗಳು ಕೋಪಾವಿಷ್ಟರಾಗಿ ಮಾತನಾಡಿ ಮಠವನ್ನೇ ಬಿಟ್ಟು ಹೊರಡಿಸುವ ಸನ್ನಿವೇಶವನ್ನು ತಂದಿಟ್ಟರು. ಶ್ರೀ ಭಿಕ್ಷದ ಗುರುವು ಮೌನವಾಗಿ ಹತ್ತಿರವಿರುವ ಬದನವಾಳು ಗ್ರಾಮದಲ್ಲಿ ಇದ್ದುಕೊಂಡು ಶ್ರೀ ಗುರುಮಲ್ಲೇಶ್ವರರ ದಾಸೋಹ ಭಿಕ್ಷದ ಮಠವನ್ನು ಸ್ಥಾಪಿಸಿ ಯಥಾವತ್ ಗುರುಲಿಂಗ ಜಂಗಮ ದಾಸೋಹವನ್ನು ಅತ್ಯನುಪಮವಾಗಿ ಗೈಯ್ಯುತ್ತಾ ಸಂತೋಷದಿಂದ ಪ್ರತಿನಿತ್ಯವೂ ಆಳುಕಾಳುಗಳನ್ನು ಕಟ್ಟಿಕೊಂಡು ಹೋಗಿ ಶ್ರೀ ಮಠದ ಜಮೀನುಗಳ ವ್ಯವಸಾಯ, ಕಳೆ ಮೊಳೆ ಏರಿ ಮೊದಲಾದ ಕೆಲಸಗಳನ್ನು ಹಗಲೆಲ್ಲಾ ಮಾಡಿಸಿ ಬಂದುಬಿಡುತ್ತಿದ್ದರು.

ಹೀಗಿರುತ್ತಿರುತ್ತ ದಿನೇ ದಿನೇ "ಶರಣರಿದ್ದಲ್ಲೇ ಹರನ ಕೈಲಾಸವೆಂಬಂತೆ" ಶ್ರೀಮನ್ನಿರಂಜನ ಗುರುಮಲ್ಲೇಶನೆಂಬ ಪರುಷದ ನಿಧಿಯನ್ನೊಳಗೊಂಡಿರ್ಪ ಶ್ರೀ ಗುರು ಭಿಕ್ಷೇಶನಿರುವೆಡೆಗೆ ಭಕ್ತಿವೃಂದವೆಂಬ ಲೋಹವು ತಂಡೋಪತಂಡವಾಗಿ ಬಂದುಬಿದ್ದು ಕನಕವಾಗುತ್ತಿದ್ದಿತಲ್ಲದೆ ಜನರಿಗೆ ದೇವನೂರು ಮಠವು ಸ್ವಪ್ನಸ್ಥಿತಿಯಾಗಿ ಬಿಟ್ಟಿತು. ಆಗ ಉಗ್ರಾಣಾಧಿಕಾರಿಗಳಾದ ಕಿನಕಳ್ಳಿ ಬಸಪ್ಪ ಶರಣರಾದಿ ಭಕ್ತರು ಒಟ್ಟುಗೂಡಿ ಚನ್ನಬಸಪ್ಪಸ್ವಾಮಿಯವರನ್ನು ಆಕ್ಷೇಪಿಸಿ ಶ್ರೀ ಭಿಕ್ಷದಪ್ಪನವರನ್ನು ಕರೆತರಿಸಿ ಮಠದ ಸರ್ವಾಧಿಕಾರವನ್ನೂ ವಹಿಸಿಬಿಟ್ಟರು. ಅಂದಿನಿಂದ ಶ್ರೀಗುರು ಭಿಕ್ಷದ ಮಹಾಪ್ರಭುವು ಸಾವಿರ ಸಾವಿರಗಟ್ಟಲೆ ಶಿಷ್ಯಾರ್ಜನೆಗೈದು ಮೆರೆದರು. ಹೊರಗಿನ ಭಕ್ತಸಮುದಾಯದಿಂದ ದಾನವಾಗಿ ಬೇಕಾದಷ್ಟು ಆಸ್ತಿಪಾಸ್ತಿಗಳು ಒಂದೇ ಸಮನೆ ಬಂದು ಸೇರಿತು. ಧನಧಾನ್ಯಗಳು ಮಠಕ್ಕೆ ಹೇರಳವಾಗಿ ಸಂಗ್ರಹಿಸಲ್ಪಟ್ಟುವು. ಮನಸಾಪೇಕ್ಷೆಯ ಗಣತಿಂತಿಣಿಯಂತೂ ಬರುವುದನ್ನು ಹೇಳತೀರದು.

ಪೂಜ್ಯ ಶ್ರೀ ಗುರುಮಲ್ಲೇಶ ಮಹಾಸ್ವಾಮಿಯ ಪವಿತ್ರ ಗದ್ದಿಗೆಯನ್ನು ಕಲ್ಲಿನಿಂದಲೇ ಕಟ್ಟಿಸಬೇಕೆಂದು ಮನಸ್ಸು ಮಾಡಿದರು. ಜತೆಗೆ ಬೆಟ್ಟದಪುರದ ಶ್ರೀ ಚಿಕ್ಕವೀರದೇಶಿಕರ ಮತ್ತು ಮಲ್ಲನಮೂಲೆ ಶ್ರೀ ಶ್ರೀ ಕಂಬಳಿಸ್ವಾಮಿಗಳವರ ಪ್ರೋತ್ಸಾಹವೂ ಹೆಚ್ಚಾಗಿ, ಮಹತ್ಕಾರ್ಯಕ್ಕೆ ಕೈಹಚ್ಚಿ ಈರಾರು ವರುಷಗಳು ದುಡಿದು, ಭಾರಿ ಭಾರಿ ಕಲ್ಲುಗಳಿಂದ ಚಿತ್ರ ವಿಚಿತ್ರವಾಗಿಯೂ, ಬಹು ಮನೋಹರವಾಗಿಯೂ, ಭಕ್ತೈಕ ಮಹಾ ಮಾತೃಸ್ಥಾನವಾಗಿಯೂ ಇಡೀ ಮಾನವಕೋಟಿಗೆಲ್ಲಾ ದರ್ಶನ ಮಾತ್ರವೇ ಪವಿತ್ರ ಫಲಸಿದ್ಧಿಯನ್ನು ಕೊಡುವ ಪಾವನಕ್ಷೇತ್ರವನ್ನಾಗಿಯೂ ರಚಿಸತೊಡಗಿದರು. ತನ್ಮಧ್ಯೆ ಚನ್ನಬಸಪ್ಪ ಸ್ವಾಮಿಗಳವರ ಮಗಳು ನೀಲಮ್ಮನವರನ್ನು ಮಠದಲ್ಲೇ ಇದ್ದ ಶ್ರೀ ಮುಳ್ಳೂರು ಗುರುಸಿದ್ದಪ್ಪನವರಿಗೆ ಬಹಳ ವೈಭವದಿಂದ ವಿವಾಹ ಮಾಡಿದರು. ಗಂಡು ಬಸವಣ್ಣನವರನ್ನು ಕೊಳ್ಳೇಗಾಲದ ತಾಲ್ಲೋಕು ಇಂದುವಾಡಿ ಗ್ರಾಮದ ಸಂಜಮ್ಮನು ಪುತ್ರಸಂತತಿ ಇಲ್ಲದ ತನಗಿದ್ದ ಒಬ್ಬಳೇ ಒಬ್ಬ ಮೊಮ್ಮಗಳು ರೇವಮ್ಮನಿಗಾಗಿ ಶ್ರೀ ಭಿಕ್ಷದ ಗುರುವನ್ನು ಮೊರೆಹೋಗಲು ಅಲ್ಲಿಗೆ ಕಳುಹಿ ಲಗ್ನಮಾಡಿ ಆ ಮನೆಯನ್ನು ಉಳಿಸಿಕೊಟ್ಟರು. ಈ ಬಸವಣ್ಣನಿಗೆ ರೇವಮ್ಮನಲ್ಲಿ ಗುರುಸ್ವಾಮಿ, ಬಸವರಾಜು ಎಂಬಿಬ್ಬರು ಗಂಡು ಮಕ್ಕಳು ಜನಿಸಿದರು. ಇವರಿಬ್ಬರನ್ನೂ ಮಠದಲ್ಲೇ ಇಟ್ಟುಕೊಂಡು ಪ್ರೀತಿಯಿಂದ ಸಾಕತೊಡಗಿದರು. ಇಷ್ಟರಲ್ಲೇ ಚನ್ನಬಸಪ್ಪಸ್ವಾಮಿಗಳೂ, ಮಗ ಬಸವಣ್ಣನವರೂ ಶಿವಾಧೀನರಾದರು.

ಭಿಕ್ಷದಾರ್ಯ ಮಹಾಸ್ವಾಮಿಗಳವರ ಸ್ವಯಂ ನೇತೃತ್ವದಲ್ಲಿ ಸಮಗ್ರವಾಗಿ ರಚಿಸಲ್ಪಟ್ಟ ಮೂವತ್ತು ಅಂಕಣ ಕಲ್ಲುಕಟ್ಟಡದ ಮೇಲೆ ಸುಂದರ ಗೋಪುರವನ್ನು ರಚಿಸಿ ಚಿನ್ನದ ಕಲಶವಿಡಿಸಿದರು.

ನೂತನ ಕಲಶಾರಾಧನೆಗೆ ಬೇಕಾದಷ್ಟು ಧನಧಾನ್ಯ ಸಕಲ ಸಾಮಗ್ರಿಗಳೂ ಸಿದ್ಧವಾದುವು. ಲಕ್ಷಗಟ್ಟಲೆ ನೆರೆದ ಸಮೂಹವನ್ನು ನೋಡಿ ಭಯಭ್ರಾಂತರಾಗಿ ಶೇಖರಿಸಿರುವ ಈ ಅಕ್ಕಿ ಸುಮ್ಮಸುಮ್ಮನೆ ತಿಂದು



ಶ್ರೀ ಗುರುಮಲ್ಲೇಶ್ವರರ ಗದ್ದಿಗೆಯ 'ಗೋಪುರ'



ಶ್ರೀ ಗುರುಮಲ್ಲೇಶ್ವರರ ಗದ್ದಿಗೆಯ "ಹೊರನೋಟ"

ಕೊಳ್ಳುವುದಕ್ಕೂ, ಈ ಬೆಲ್ಲ ಕಡ್ಕೋಳೋದಿಕ್ಕೂ ಈ ಜನಕ್ಕೆ ಸಾಲುವು ದಿಲ್ಲವಲ್ಲಾ; ಈ ಚೆಡ್ಡಿಯಪ್ಪ ಹ್ಯಾಗೆ ಆರಾಧನೆ ಮಾಡ್ತಾನೆ ಎಂದು ಮುಂತಾಗಿ ಜನರು ಆಡ್ಕೊಳ್ಳೋದ್ಕೋಗ್ತ ಶ್ರೀ ಚಿಕ್ಕವೀರೇಶರೂ, ಶ್ರೀ ಕಂಬಳಿಯವರೂ ಕೂಡ ಅಂದುಬಿಟ್ಟರು. ಈ ಸಮಾಚಾರ ಭಿಕ್ಷದ ಗುರು ವಿಗೆ ಮುಟ್ಟಿತು. ಅದಕ್ಕವರು "ಹೋಗಜ್ಜಾ ನಾನೊಬ್ಬ ಚಕ್ರ, ನನ್ನೊ ಡೆಯ ಚಕ್ರವರ್ತಿ, ನನ್ನಕೈಲಿ ಚಕ್ರದೊಣ್ಣೆ ಕೊಟ್ಟು ಸಾರು ಅಂತ ಹೇಳಿ ನಿಲ್ಸಿದ್ದಾನೆ. ಸಾರೋದು ನನ್ನ ಕರ್ತವ್ಯ, ಕಾರ್ಯ ಪೂರೈಸಿಗೊಳ್ಳುವುದು ಅವನ ಕರ್ತವ್ಯ, ಅವಮಾನ ಬಹುಮಾನವೆಲ್ಲಾ ಅವನಿಗೆ ಸೇರಿದ್ದು, ಇದನ್ನೊಂದು ಸುದ್ದಿ ಅಂತ ನನ್ನ ಹತ್ತಿರಕ್ಕೆ ತಂದಿದ್ದೀಯಾ" ಎನ್ನುವಷ್ಟ ರಲ್ಲೇ ಅಡುಗೆಯೆಲ್ಲಾ ಸನ್ನದ್ಧವಾಗಿ ಬಿಟ್ಟದ್ದಿತು. ಕೂರ್‍ಸೋ ಪಂಕ್ತೀನ ಎಂದಾಕ್ಷಣವೇ ಬೆಳ್ಳಿಯ ಬೆಟ್ಟದಂತೆ ಶೋಭಿಸುತ್ತಿದ್ದ ಅನ್ನದ ರಾಶಿಯ ಹತ್ತಿರಕ್ಕೆ ಬೆಟ್ಟದಪುರದ ಶ್ರೀಗಳನ್ನೂ ಕಂಬಳಿಯವರನ್ನೂ ಕರೆತರಿಸಿ ಪೂಜಾ ಸಾಮಗ್ರಿಗಳನ್ನು ತರಿಸಿ ರಾಶಿಯಮೇಲೆ ಬೆಟ್ಟದ ಪುರದಪ್ಪನವ ರನ್ನು ನಿಲ್ಲಿಸಿ ನಮ್ಮೀ ಗುರು ಭಿಕ್ಷದಪ್ಪನವರೇ ಪಾದಪೂಜೆ ಮಾಡಿ "ಜೈನಮಃ ಪಾರ್ವತೀಪತೇ ಹರಹರ ಮಹಾದೇವ, ಅಲಕ್‌ನಿರಂಜನ ಗುರುಮಲ್ಲೇಶ ಮಹಾಪ್ರಭೋ" ಎಂದು ದೀರ್ಘದಂಡ ನಮಸ್ಕಾರ ಮಾಡಿ ಮೇಲೇಳುವಷ್ಟರಲ್ಲಿಯೇ ಪ್ರಸಾದ ರಾಶಿಯು ಇಬ್ಭಾಗವಾಯಿತು. ಒಕ್ಕಡೆ ಯಿಂದ ಬೆಟ್ಟದ ಪುರದಪ್ಪನವರನ್ನು ಅನ್ನ ತುಂಬಿಡುವುದಕ್ಕೆ, ಮಕ್ಕರಿಗ ಳನ್ನು ಎತ್ತಿಕೊಡಲು ಮಲ್ಲನಮೂಲೆ ಬುದ್ಧಿಯವರನ್ನು ನಿಯಮಿಸಿ ತಾವು ಪಂಕ್ತಿಯ ಮೇಲೆ ನಿಂತು ನೀಡಿಸಿ ಅಸಾಧ್ಯ ಪರಿಸೆಯನ್ನೆಲ್ಲಾ ನಿಶ್ಶಬ್ದವಾಗಿ ತಣಿಸಿಬಿಟ್ಟರು. ಪ್ರಸಾದರಾಶಿ ಅರ್ಧ ಮುಗಿಯಿತು. ಇನ್ನರ್ಧವನ್ನು ಬಂದಿದ್ದ ಪರಿಸೆ ಎಲ್ಲಾ ತಮ್ಮ ತಮ್ಮ ಊರುಗಳಿಗೆ ಹೊತ್ತುಕೊಂಡು ಹೋದರೂ ಇನ್ನೂ ಬೇಕಾದಷ್ಟು ಉಳಿಯಿತು. ತುಂಬಿ ಟ್ಟದ್ದು, ಎತ್ತಿಕೊಟ್ಟದ್ದು ಅವರವರಿಗೆ ಗೊತ್ತಿಲ್ಲದೆ ಭ್ರಾಂತರಾಗಿಬಿಟ್ಟರು. ಇನ್ನೂ ನೂರಾರು ಮೂಟೆ ಅಕ್ಕಿ, ಹತ್ತಾರು ಸಾವಿರ ಬೆಲ್ಲ ಎಲ್ಲವನ್ನೂ ಈಚೆಗೆ ಎಳ್ಸಿ ಹಾಕ್ಸಿ ಇನ್ನಿರೋದನ್ನು ಯಾವನಾದ್ರು ನಮ್ಮಪ್ಪ ಬೇಕಾದ್ರೆ ಬೇಯಿಸಿ ಹಾಕಿಸಲಿ ಎಂದು ಡಂಗೂರ ಹೊಡೆಸಿದರು. ಭಿಕ್ಷದಪ್ಪ ಎಂದರೆ

ಲೋಕಕ್ಕೆ ಇಕ್ಕುವುದಕ್ಕೆ ಬಂದ ಮೋಕ್ಷದಪ್ಪ. ಇವನು ಸಾಮಾನ್ಯ ನಲ್ಲವೆಂದು ಸಂತೋಷಗೊಂಡು ಎಲ್ಲರೂ "ಅಲಕ್ ನಿರಂಜನ ಗುರು ಮಲ್ಲೇಶ ಮಹಾಪ್ರಭೋ, ಶ್ರೀರ್ಮ ನಿರಂಜನ ಭಿಕ್ಷೇಶ ಮಹಾಸ್ವಾಮಿ ಭೋಪರಾಕ್" ಎಂದು ಜಯಘೋಷ ಮಾಡಿ ಹೊಗಳುವವರಾದರು. ಈ ಕಿಕ್ಕಿರಿದ ಜನಸಂದಣಿಯ ನಡುವೆ ಸಿಕ್ಕಿ ಪ್ರಾಣವಳಿದ ಮಗುವೊಂದನ್ನು ಸಾಕ್ಷಾತ್ ಭಿಕ್ಷದಗುರು ತಾನೇ ಗಕ್ಕನೆ ಬಂದೆತ್ತಿಕೊಂಡು ಹೋಗಿ ಪೂಜ್ಯ ಗದ್ದಿಗೆಯೊಳಗಡೆ ಮಲಗಿಸಿಬಿಟ್ಟು ಹೊರಗೆ ಬಂದು ಬಾಗಿಲು ಬೀಗ ಮುದ್ರೆಯನ್ನು ಬಲಿಸಿ ಎಲ್ಲರನ್ನೂ ಅವರವರ ಕರ್ತವ್ಯದಲ್ಲಿ ನಿರತರಾಗಿರು ವಂತೆ ಮಾಡಿ, ತಾವು ಹರಗುರು ಚರಮೂರ್ತಿಗಳ ನಡುವೆ ರಾತ್ರಿಯೆಲ್ಲಾ ಭಜನಾನಂದಲೋಲುಪ್ತರಾಗಿದ್ದು ಪ್ರಾತಃಕಾಲ ಮುನ್ನವೇ ದ್ವಾರವಟ್ಟ ವನ್ನು ತೆಗೆಯಿಸಿ ಜೀವಸಹಿತ ಅಳುತ್ತಿದ್ದ ಮಗುವನ್ನು ಕರೆತಂದು ಅವರ ತಂದೆ ತಾಯಿಗಳ ವಶಕ್ಕೆ ಕೊಟ್ಟರು. ಮತ್ತು ಚಿನ್ನದ ಕಲಶದ ಪ್ರಭುವು ತನ್ನೀ ಮಹಾತ್ಕಾರ್ಯದಲ್ಲಿ ಇಂಥಾ ಅಪವಾದಗಳನ್ನು ಹೊತ್ಕೊಳ್ತಾನೆ ಏನು? ಎಂದಿಗೂ ಇಲ್ಲ. ಮೂರು ಕೋಟಿಲಿಂಗ ಮಸ್ತಕಗಳ ಮೇಲೂ ಪಾದವಿಟ್ಟು ನಿಂತಿದ್ದ ಮಹಾರೇಣುಕರು! ಇವರೇನು ಸಾಮಾನ್ಯರೆ!? ಅಂಥಾವನು ಕಣ್ರೋ ನನ್ನ ಪ್ರಭು ಎಂದು ಕುಣಿದಾಡಿಬಿಟ್ಟರು. ಸಭೆ ಎಲ್ಲಾ ಬೆರಗಾಗಿ "ಜೈನಮಃ ಪಾರ್ವತೀಪತೇ ಹರಹರ ಮಹಾದೇವ, ಅಲಕ್ ನಿರಂಜನ ಶ್ರೀ ಗುರುಮಲ್ಲೇಶ ಮಹಾಸ್ವಾಮಿಗೆ ಜೈ ಪರಾಕ್, ಶ್ರೀರ್ಮ ನಿರಂಜನ ಭಿಕ್ಷೇಶ ಮಹಾಸ್ವಾಮಿ ಭೋಪರಾಕ್" ಎಂಬ ಜಯಘೋಷದೊಡನೆ "ಸತ್ತವಂಗೆ ಮರಳಿ ಪ್ರಾಣವಿತ್ತು ಮೆರೆದ ಬಸವಲಿಂಗ" ನೆಂಬುದಾಗಿ ಪುರಾಣದಲ್ಲಿ ಕೇಳಿದ್ದೆವು. ಈಗತಾನೇ ಅದೇ ಬಸವೇಶ್ವರಾವತಾರಮೂರ್ತಿ ಶ್ರೀ ಗುರು ಭಿಕ್ಷದ ಪ್ರಭುವು ಪ್ರತ್ಯಕ್ಷ ಬದುಕಿಸುದುದನ್ನು ಕಣ್ಣಾರೆ ಕಂಡೆವು ಎಂದು ಸಂತೋಷದಿಂದ ಕೊಂಡಾಡಿ ಅವರವರ ಊರುಗಳಿಗೆ ತೆರಳಿದರು. ಸಾಕಾರದಲ್ಲಿದ್ದು ತೋರುವ ಮಹತ್ತು ಮಹತ್ತಲ್ಲ, ನಿರಾಕಾರದಲ್ಲಿ ಕುಳಿತು ನಡೆಸಿಕೊಳ್ಳುತ್ತಿರುವುದು ಈ ಗುರುಮಲ್ಲೇಶ ಮಹಾತ್ಮೆ! ನಂಬ್ಕೊಳ್ರೊ, ಚಿನ್ನದ ಕಲಶದವನನ್ನು



ಶ್ರೀ ಭಿಕ್ಷದ ಸ್ವಾಮಿಗಳ ಕರಸಂಜಾತರಾದ

ಶ್ರೀ ತೋಂಟದಾರ್ಯ ಸ್ವಾಮಿಗಳು.

ಎಡಬಿಡದೆ ನಂಬ್ರೊ! ನನ್ನ ಒಡೆಯನನ್ನು ನಂಬ್ರೊ ಎಂದು ಭಿಕ್ಷೇಶ ಗುರುವು ಎಲ್ಲರನ್ನೂ ಹರಸಿ ಬೀಳ್ಕೊಟ್ಟರು.

ಅಂದಿನಿಂದ ಶ್ರೀ ಮಠಕ್ಕೆ ಮತ್ತಷ್ಟು ಹೆಚ್ಚಾಗಿ ಶಿಷ್ಯರ ಸಂಖ್ಯೆ ಬಹುಳವಾಗುತ್ತಾ, ಭಕ್ತರ ಮೂಲಕ ಸ್ಥಿರ ಚರ ಆಸ್ತಿಗಳ ಸಂಗ್ರಹಣೆ ಯಾಗುತ್ತಾ, ದಿನೇದಿನೇ ಗದ್ದಿಗೆ ಪೂಜೆ, ಗುರುಲಿಂಗ ಜಂಗಮ ದಾಸೋಹ ವೆಗ್ಗಳವಾಗುತ್ತಾ ಎಲ್ಲೆಲ್ಲೂ ತಾತ್ವಿಕ ವ್ಯಾಮೋಹಗಳು ವೃದ್ಧಿಯಾಗಿ ಗ್ರಾಮ ಗ್ರಾಮಗಳಲ್ಲೂ ದೇವನೂರು ಶಾಖಾ ದಾಸೋಹ ಭಿಕ್ಷದ ಮಠಗಳು ಸ್ಥಾಪಿಸಲ್ಪಡುತ್ತಾ ಬಂದುವು. ಹಾಗೆಯೇ—

"ಬಸವ ಭಕ್ತಿಯ ಚೆಲ್ವ | ಕುಸುಮ ವಾಸನೆ ನಾಲ್ಕು |
ದೆಸೆಯ ಮುಸುಕಲು ಶರಣ | ರೊಸೆದು .... .... ...."

ಕಲ್ಯಾಣಕ್ಕಾಗಮಿಸಿದಂತೆ, ಅಕ್ಷಯಮೂರ್ತಿ ಶ್ರೀ ಗುರು ಭಿಕ್ಷದ ಮಹಾಸ್ವಾಮಿಯ ಚಿತ್ಪ್ರಭಾವವು ಜಗತ್ತಿನಲ್ಲೆಲ್ಲಾ ಬೆಳಗತೊಡಗಲು, ಗಿರಿ ಗವಿ ನೆಲಬಿಲ ಜಪ ಸಮಾಧಿಸ್ಥರಾಗಿದ್ದ ಶರಣರೆಲ್ಲಾ ದೇವನೂರು ಮಠಕ್ಕೆ ಗುಂಪು ಗುಂಪಾಗಿ ಚಿತ್ತೈಸುವರಾದರು. ಈ ರೀತಿ ಸದ್ಭಕ್ತಿ ಸುಭಿಕ್ಷವೇ ಮೂರ್ತಿಮತ್ತಾದ ಚಿದ್ಬಾಳಾಕ್ಷ ಗುರು ಭಿಕ್ಷೇಶನ ಸದ್ಭಕ್ತಿ-ಎಂಬ ಸೂಜಿ ಗಲ್ಲಿನ ದೆಸೆಯಿಂದ ಆಕರ್ಷಿತರಾದ ಶರಣ ಸಮೂಹದಲ್ಲಿ ನಾನಾ ಬಗೆಯ ಭೋಗಾಪೇಕ್ಷಿಗಳೂ, ಜ್ಞಾನಾನಂದ ರಾಗೋಲ್ಲಾಸರೂ, ಪ್ರಾಣಲಿಂಗಾನು ಸಂಧಾನರೂ, ಭಕ್ತಿ ಸೇವಾಕಾಂಕ್ಷಿಗಳೂ, ಹರ ಗುರು ಚರಮೂರ್ತಿಗಳೂ ಇರುತ್ತಿದ್ದರು. ಇವರೆಲ್ಲರಿಗೂ

ಆರಾರ ಮನದಿಚ್ಛೆ | ಹಾರೈಸಿ ಬಂದರೆ |
ಮೀರಿದೆಲ್ಲರ ಮನ | ಹಾರ ನಡೆಸುತ್ತಲಿದ್ದರು |

ಮೂರಾರಿಯಪರಾವತಾರ ಶ್ರೀ ಗುರು ಭಿಕ್ಷೇಶ ಪ್ರಭುವು ಮೈಸೂರಿ ನಲ್ಲಿ ವಿದ್ಯಾ ವ್ಯಾಸಂಗದಲ್ಲಿದ್ದು ಬಾಲ್ಯದಲ್ಲಿಯೇ ಶಿವತತ್ವ ಜ್ಞಾನವನ್ನು

ಅಳವಡಿಸಿಕೊಂಡಿದ್ದ ಸುಜ್ಞಾನಿಗಳೂ, ಪರಮಾರ್ಥ ಸಂಪನ್ನರೂ, ಗುರುಲಿಂಗ ಜಂಗಮ ಸೇವಾ ಧುರೀಣರೂ, ಲಿಂಗೋಪಭೋಗಿಗಳೂ, ಪ್ರಶಾಂತಚಿತ್ತರೂ, ಹಸನ್ಮುಖ ಭಸಿತವದನರೂ, ಕೆಂದಾವರೆಯಂತೆ ಪಾದವುಳ್ಳವರೂ ಆದ ಮೂಗೂರು ಬಸವನಗುಡಿ ಮಠದ ಶ್ರೀ ತೋಂಟದ ಸ್ವಾಮಿಗಳೆಂಬುವರನ್ನು ಕರೆದುಕೊಂಡುಬಂದು ಶ್ರೀ ಗದ್ದಿಗೆಯ ಪೂಜಾ ಕರ್ತವ್ಯದಲ್ಲಿ ನಿಲ್ಲಿಸಿದರು. ಚೆಲುವರೂ, ಮೃದುಸ್ವಭಾವದವರೂ, ಜಗದ್ವೈಭವ ಮೂರ್ತಿಗಳೂ ಆದ ಈ ಮಹನೀಯರು ಮುಂದೆ ಶ್ರೀಮಠದ ಕೀರ್ತಿಧ್ವಜವನ್ನು ಎತ್ತಿ ಹಿಡಿದರು.

ಮತ್ತೊಬ್ಬರೆಂದರೆ ಅಪ್ರತಿಮ ಸೇವಾಮನೋಭಾವದವರು. ಮಹಾ ವೈರಾಗ್ಯ ಸಂಪನ್ನರು. ಶ್ರೀ ಶಿವಪ್ಪಸ್ವಾಮಿಯವರು. ಇವರು ಕೆಸರಿನಲ್ಲುದಿಸಿದ ತಾವರೆ ಶಿವನ ಮಸ್ತಕವನ್ನಲಂಕರಿಸುವಂತೆ ಬಾಗಳಿ ಎಂಬ ಊರಿನಲ್ಲಿ ಬಾಲಲೀಲೆಯ ದಾಂಟಿ, ಕಾಲಕರ್ಮ ಮಾಯಾತೀತ ವಜ್ರಕಾಯರಾಗಿ, ಮೂಲಮಂತ್ರ ಸ್ವರೂಪ ಶ್ರೀ ಗುರು ಭಿಕ್ಷೇಶ ಕರ ಕಮಲ ಸಂಜಾತರಾಗಿ ಶ್ರೀ ಮಠದ ಸೇವೆಯಲ್ಲಿ ನಿರತರಾದರು. ಇವರ ಕಾಯಾ, ವಾಚಾ, ಮನಸಾಂತಃಕರಣಗಳ ಸ್ಫೂರ್ತಿ ಎಂದರೆ ಶಿವಾಭಿನ್ನ ನುಡಿನಡೆಗಳು ಅ-ಮಾನುಷವಾದುವುಗಳು. ಸಚ್ಚರಿತ ಸದ್ಗುರುವಿನ ನೆಲೆಯರಿತವರುಚ್ಚರಿಸುತ ಪ್ರಣಮದೆಚ್ಚರಿಕೆಯೊಳ್ಳುಳಿತು ಭಾವಿಸಿದ್ದಾ ದರೆ ಶ್ರೀ ಶಿವನ ಪ್ರತಿಬಿಂಬವೇ ಹಿಂದೆ ಸ್ಥಾವರ ಲಿಂಗಾಲಯಗಳನ್ನೂ ಹುತ್ತಿ ಕೆರೆಕಟ್ಟೆ ಕಟ್ಟಡಗಳನ್ನು ಮಾಡಿಮಾಡಿ "ಶಿವನೊಳಗೆ ಪ್ರಾಣಮನ| ತವೆಬೆರಸಿ ಹೊರಗಳೆದು| ಶಿವನ ಬೆಳಗಿನೊಳು ಪರವಶವನ್ನೈದಿ| ಶಿವನೆ ತಾನಾಗಿರ್ದ| ಶಿವಸಿದ್ಧರಾಮಯ್ಯ...." ಎನಿಸಿಕೊಂಡುದಕ್ಕಿಂತಲೂ, ಹರಗುರುಚರಮೂರ್ತಿಗಳ ವಿರಾಮಸ್ಥಾನವಾದ, ಹಾಗೂ ಅನುಭವ ಮಂಟಪಪ್ರಾಯವಾದ ದಾಸೋಹ ಭಿಕ್ಷದ ಮಠಗಳನ್ನೂ, ಲೋಕಕ್ಕೆ ಏಕೈಕ ಮಹಾ ಪುಣ್ಯಫಲಪ್ರದ ತೀರ್ಥವನ್ನುಳ್ಳ ಪವಿತ್ರ ಕಲ್ಯಾಣಿ ಬೊಂಬನ್ನು ಕಟ್ಟಿ ಗುರುವಿನ ಗುರು ಪರಮಗುರು ಶ್ರೀ ಗುರುಮಲ್ಲೇಶನ ದಿವ್ಯ ಸನ್ನಿಧಿಯಲ್ಲಿ ಭಿಕ್ಷದಾರ್ಯ ಗುರೋತ್ತಮನ ಕರುಣೆಯ ಕಂದನಾಗಿ



ಶ್ರೀ ಭಿಕ್ಷದಸ್ವಾಮಿಗಳ ಕರಸಂಜಾತರಾದ

ಶ್ರೀ ಶಿವಪ್ಪನವರು



ಶ್ರೀ ತೋಂಟದಾರ್ಯಸ್ವಾಮಿಗಳಿಂದ ಕಟ್ಟಿಸಲ್ಪಟ್ಟ ಆರ್ಚ್



ಶ್ರೀ ಶಿವಪ್ಪನವರಿಂದ ಕಟ್ಟಿಸಲ್ಪಟ್ಟ ಕಲ್ಯಾಣಿ

ಭಕ್ತಿ ಯೋಗದಲ್ಲಿ ತೊಡಗಿ ಸತ್ಯಗುರುವೇ ಶಿವೇಶ ನಾಗಬೇಕೆಂದು ಬಂದಂತೆ ಭಾಸವಾಗುತ್ತಿತ್ತು ಅವರ ನಿಲುವು. ಇದಿಲ್ಲದಿದ್ದ ಕೆ ಶ್ರೀ ಮಠವನ್ನು ವಿಶಾಲ ಹಾಗೂ ಅತ್ಯುನ್ನತ, ಭೀಮ-ಬಂಧುರವಾಗಿ ಕಟ್ಟಿ ಇಡೀ ಜಗತ್ತಿನ ಮಾನವ ಕೋಟಿಗೆಲ್ಲಾ ಆಧ್ಯಾತ್ಮಿಕ ತತ್ವ ಪ್ರಸಾರ ಮಹಾಕೇಂದ್ರವನ್ನಾಗಿ ರಚಿಸಬೇಕೆಂಬ ಶ್ರೀ ಗುರು ಭಿಕ್ಷದಪ್ಪಗಳ ಮಹ ದಾಶೆಯನ್ನೀಡೇರಿಸಲು ಮತ್ತಿತರರಿಗೆ ಸಾಧ್ಯವಾಗದ ಕಾರಣ ಶ್ರೀಮ ನಿರಂಜನ ಗುರುಮಲ್ಲೇಶನೇ ಶ್ರೀ ಶಿವಪ್ಪಗಳಾಗಿ ಬಂದಿದ್ದಂತೆ ಕಾಣು ತ್ತಿತ್ತು. ಶ್ರೀ ನಿಜಗುಣ ಶಿವಯೋಗಿಗಳು ನುಡಿಯಲ್ಲಿ ತೋರಿದ ಸಚ್ಛಿಶ್ಯ ಲಕ್ಷಣಗಳನ್ನು ನಡೆಯಲ್ಲಿ ತೋರುವ ಪ್ರಯುಕ್ತ "ಗುರುಭಕ್ತ" ಅಂದರೆ ಗುರುವೇ ಭಕ್ತನಾಗಿ ಬಂದು ಭಕ್ತಿಯ ಮಾರ್ಗವನ್ನು ತೋರದಿ ದ್ದಲ್ಲಿ ನರನು ಹರನಾಗುವುದೇ ಇಲ್ಲವಾದಕಾರಣ ಸಾಕ್ಷಾತ್ ಗುರು ಮಲ್ಲೇಶನೇ ಶಿವೇಶನಾಗಿ ಬಂದಿದ್ದುದು ನಿಸ್ಸಂದೇಹವಾದ ಮಾತು. ಇದಕ್ಕೆ "ಮದ್ಭಕ್ತೋ ಮಮಾಧಿಕಃ" ಎಂಬ ಶಿವೋಕ್ತಿಯೇ ಸಾಕ್ಷಿ ಯಾಗಿರುವುದು. ಇವರ ನಡೆನುಡಿಗಳು ಲೋಕಕ್ಕೆಳವಡದವುಗಳು, ಇವರ ಕಾರ್ಯಕಲಾಪ ಮಹತ್ವವಂತೂ ಚಿರಸ್ಥಾಯಿಯಾಗುಳಿದಿರುವವು ಗಳು. ಮತ್ತೂ ಹೇಳುವುದಾದರೆ ಒಂದು, ಎರಡು ಮೂರರಲ್ಲೂ ನಾನೇ ಬರುತ್ತೇನೆ ಎಂದು ಅಪ್ಪಣೆ ಕೊಡಿಸಿದ್ದ ಶ್ರೀ ಗುರುಮಲ್ಲಪ್ಪನವರ ವಾಕ್ಯಸಾದವೆಂದಿಗೂ ಹುಸಿಯಾಗದೆಂದು ಇಂದಿಗೂ ಹಿರಿಯರು ಹೇಳು ತ್ತಿದ್ದಾರೆ. ಈಗಲೂ ಅವರು ಸ್ಥಾಪಿಸಿ ಹೋಗಿರುವ ಸಂಸ್ಥೆಗಳು ಮತ್ತು ತತ್ವಗಳು ವ್ಯತ್ಯಾಸವಾದರೆ ಯಾವ ಹೊತ್ತೂ ಅಪಾಯವೇ. ಈ ಕಾರಣ ಗಳಿಂದ "ಗುರುಮಲ್ಲಪ್ಪನೇ ಶಿವಪ್ಪ" ಅಂದರೆ ತಪ್ಪಾಗಲಾರದು. ಬಾಹ್ಯಾಡಂಬರದಲ್ಲಿ ಕಲ್ಲಾಗಿ ಕಾಣುವ ಕಲ್ಲುಸಕ್ಕರೆಯಂತೆ ಕಂಡರೂ, ಒಳಗಂದರೆ ಸಕ್ಕರೆವೆರೆದ ಮಧುವಿನಂತೆ ಅದಕ್ಕೂ ಅಧಿಕ ಮೃದುಮಧುರ ವಾಗಿದ್ದರು ಶ್ರೀ ಶಿವಸ್ವಾಮಿಯವರು.

ಹೀಗೆ ಅನೇಕ ಜನ ಶಿಷ್ಯರು ಚಿನ್ಮಯಗುರು ಭಿಕ್ಷದಪ್ಪನವರ ಅಪ್ಪಣೆಯ ಪ್ರಕಾರ ಒಂದೊಂದು ಸೇವಾಕಾರ್ಯದಲ್ಲಿ ನಿರತರಾಗಿದ್ದರು

ಶ್ರೀ ಭಿಕ್ಷದ ಗುರುವು ಕೈವಶವಾಗುವವರೆವಿಗೂ ಆಭವನು ರಹಸ್ಯವಾಸ ದಲ್ಲಿದ್ದಂತೆ ಇದ್ದು ಶ್ರೀ ಶಾಂತಮಲ್ಲೇಶ ಗುರುವಿನ ಮಹತ್ಪ್ರಭಾವವು ಅಂದಿನಿಂದ ಜಗಜ್ಜ್ಯೋತಿಯಾಗಿ ಪರಿಣಾಮಗೊಳ್ಳುತ್ತಾ ಬಂತು.

ಶ್ರೀಮದ್ ನಿರಂಜನ ಗುರುಮಲ್ಲೇಶರ ಮಹಾಸ್ವಾಮಿಯ ಗದ್ದಿಗೆಯ ಮುಂಭಾಗದಲ್ಲಿ ಉಳಿದಿದ್ದ ನಿವೇಶನವನ್ನು ನಾಲ್ಕು ಕಂಬಗಳನ್ನಿಟ್ಟು ಮೇಲ್ಛಾವಣಿ ಮುಚ್ಚಬೇಕೆಂದಿದ್ದ ಸಚ್ಚಿದಾನಂದಪ್ರಭು ಭಿಕ್ಷೇಶಪ್ರಭು ವಿನ ಇಂಗಿತವನ್ನರಿತು, ಭಿಕ್ಷದಾರ್ಯರು ಭಕ್ತರ ಊರುಗಳಲ್ಲಿ ಪ್ರವಾಸ ವಿದ್ದ ಸಂದರ್ಭದಲ್ಲಿ, ಕಂಭಗಳನ್ನು ಇಡದೆ ವಿಶಾಲವಾದ ಹಜಾರವನ್ನೊಳ ಗೊಂಡ ದೊಡ್ಡದೊಂದು ಆರ್ಚನ್ನು ಮಾಡಿ ಮುಪ್ಪಿನ ಮಹಾಸ್ವಾಮಿಗಳ ವರ ಮೂರ್ತಿಯನ್ನು ಅದರಲ್ಲಿ ಕೆತ್ತಿಸಿ, ಒಳಗೆ ಶಿವನ ಪಂಚವಿಂಶತಿ ಲೀಲೆ ಗಳಲ್ಲಿ ಐದನ್ನು ನಿರ್ಮಿಸಿ ಚಿತ್ರವಿಚಿತ್ರ ತೆರದ ಬಣ್ಣಗಳಿಂದ ಬಹು ಮನೋಹರವಾಗಿ ಮಾಡಿಸಿಬಿಟ್ಟರು ಶ್ರೀ ಶಿವಪ್ಪ ಮಹಾಸ್ವಾಮಿಯವರು. ಪ್ರವಾಸ ಮುಗಿಸಿಕೊಂಡು ಬಂದ ಭಿಕ್ಷದಗುರುವು ಬಸವನ ಬಾಗಿಲನ್ನು ಪ್ರವೇಶ ಮಾಡಿದೊಡನೆಯೇ ನೂತನವಾಗಿ ನಿರ್ಮಿಸಿದ್ದ ಆ ರಮ್ಯವಾದ ಕಟ್ಟಡವನ್ನು, ಅದರ ಸೊಬಗನ್ನು ನೋಡಿ ಅಚ್ಚರಿಯ ಲೀಲೆಯಲ್ಲಿ ಓಲಾಡಿಬಿಟ್ಟರಲ್ಲದೆ, ಪರವಶರಾಗಿ ಕುಣಿದೇ ಬಿಟ್ಟರು. ಸುತ್ತಮುತ್ತ ನೆರೆ ದಿದ್ದ ಜನರಿಗೆ ಅಂಧಕಾಸುರನ ವಕ್ಷರಂಗದಲ್ಲಿ ನರ್ತಿಸಿದ ಶ್ರೀ ಶಿವನ ತಾಂಡವ ನೃತ್ಯದಂತೆ ಆ ಲೀಲೆ ತೋರುತ್ತಿತ್ತು. ಎಂಥವನಯ್ಯ ಶಿವಪ್ಪ! ಏನು ಚೆನ್ನಾಗಿ ಮಾಡ್ಸಿಬಿಟ್ಟಿದ್ದಾನೆ! ಇದನ್ನೆಲ್ಲೋ ಕಲ್ತ, ಸಾಮಾನ್ಯನೇ ಶಿವಪ್ಪ ಎಂದು ಮುಂತಾಗಿ ಶ್ರೀ ಗುರು ಭಿಕ್ಷದಾರ್ಯ ಮಹಾಸ್ವಾಮಿಯು ಸಂತೋಷದಿಂದ ಪೂಜ್ಯ ಗದ್ದಿಗೆಗೆ ನಮಸ್ಕರಿಸಿ ಕರ ಮುಗಿದಿದ್ದು, ಇದೆಲ್ಲಾ ನಿನ್ನ ಮಹಿಮೆ ಚಿನ್ನದ ಕಲಶದಪ್ಪಾ ಎಂದು ಹಾಗೆಯೇ ದನಗಳ ಕೊಟ್ಟಿಗೆಗೆ ಮೊದಲು ಹೋಗಿ ಕಸ ಗುಡಿಸಿದೆಯೆ? ಕರುಮರಿಗಳಿಗೆ ಹುಲ್ಲು ಹಾಕಿದೆಯೆ? ನೀರು ಕುಡಿಸಿದೆಯೆ? ನೋಡ್ಬಿಟ್ಟು ಬಾಕಿ ವಿಚಾರ ವಿಮರ್ಶೆ, ಅನಂತರ ಅವರಿಗೆ ಮಧ್ಯೆ ಮಧ್ಯೆ ಒಪ್ಪಿಸುವ ಎಲ್ಲಾ ವರದಿಗಳನ್ನೂ ಹಾಗೆಯೇ ಕೇಳಿಕೊಳ್ಳುತ್ತಾ ಬಂದು, ಸ್ವಸ್ಥಾನ ಮಂಡಿತ



ಶಿವನ ಪಂಚವಿಂಶತಿ ಲೀಲೆ



ಶ್ರೀ ಮಠದ ಹೂತೋಟ

ರಾಗಿ ಯಾರು ಯಾರಿಗೆ ಯಾವ ಯಾವ ರೀತಿ ಶಿಕ್ಷಣರಕ್ಷಣೆಗಳನ್ನು ನೀಡಬೇಕೊ ಆಯಾಯ ರೀತಿ ನೀತಿಗಳಿಂದ ಎಲ್ಲರನ್ನೂ ಸಂತುಷ್ಟಿಗೊಳಿಸಿ ಮಠದ ಎಲ್ಲಾ ಜಮೀನು, ತೋಟ, ಅಡು, ಎಲ್ಲಕ್ಕೂ ಹೋಗಿ ನೋಡಿ ಕೊಂಡು ಬರುತ್ತಿದ್ದರು.



## ಅಧ್ಯಾಯ ೮

ದೇವನೂರಿನ ಹತ್ತಿರ ಅಳಗಂಚಿ ತಗಡೂರು ಗ್ರಾಮಗಳ ಮಧ್ಯೆ ಶ್ರೀ ಮಠದ ಜಮೀನು ಮತ್ತು ಹುಲ್ಲುಗಾವಲಿಗೆ ಸೇರಿದ ರೀತಿ (ಅರಸುಗಳ ಅಡು) ನೂರಾರು ಎಕರೆ ಜಮೀನಿದೆ. ಅಲ್ಲಿ ಮೈಸೂರು ಮಹಾರಾಜ ರವರ ದನಗಳು ಮೇಯುವುಕ್ಕೂ ವಿಶಾಲವಾದ ಅಡುವಿತ್ತು. ಇದು ಯಥೇಚ್ಛವಾಗಿ ಹುಲ್ಲು ಬೆಳೆಯುವ ಪ್ರದೇಶ. ಇಲ್ಲಿಗೆ ಆಗಾಗ್ಗೆ ಅರ ಮನೆಯ ಗೋವುಗಳು ಬಂದು ಅಳಗಂಚಿಯಲ್ಲಿದ್ದುಕೊಂಡು ಮೇವು ಮುಗಿಯುವವರೆಗೂ ಮೇದು ಹೋಗುತ್ತಿದ್ದುವು. ಈ ಕಾರಣ ಆಗಿನ ಮೈಸೂರು ದೊರೆ ಶ್ರೀ ಮದ್ಗಾಂಭೀರ್ಯಯುತರೂ, ಭಕ್ತಿ ಸಂಪನ್ನರೂ, ಸದ್ಗುಣಗಳಿಂದೊಡಗೂಡಿದ ಮಹಾಪುರುಷರೂ ಆದ ನಾಲ್ವಡಿ ಕೃಷ್ಣರಾಜ ಒಡೆಯರು ಬಂದು ಇನಾಂ ಅಳಗಂಚಿ ಗ್ರಾಮದಲ್ಲಿ ಇದ್ದು ಹೋಗುವ ಪದ್ಧತಿ ಇತ್ತು. ಹೀಗಿರುವಾಗ್ಗೆ ಶ್ರೀ ಭಿಕ್ಷದ ಗುರುಗಳ ವಾರ್ತೆಯನ್ನು ಬಂದ ಬಂದಾಗಲೆಲ್ಲಾ ಕೇಳುತ್ತಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ಸ್ವಾಮಿಗಳ ದರ್ಶನ ಮಾಡಬೇಕೆಂಬ ಕುತೂಹಲವುಳ್ಳವ ರಾಗಿ ಅಲ್ಲಿದ್ದವರೊಡನೆ ಸೂಚನೆ ಇತ್ತರು. ಕೂಡಲೇ ರಾಜರ ಒಡನಾಡಿ ಗಳು ಶ್ರೀ ಗುರುಗಳ ಶಿಷ್ಯರನ್ನೇ ಬೆಂಬಳಿವಿಡಿದು ಬಂದು ಬಹಳ ದೈನ್ಯ ದಿಂದ ಬೇಡಿದರೂ ಬರಲೊಪ್ಪದಿದ್ದ ಲೀಲಾಮೂರ್ತಿಯನ್ನು ಹೇಗೋ ಒಡಂಬಡಿಸಿ ಬಲವಂತದಿಂದ ಕರೆದುಕೊಂಡು ಹೊರಟರು. ಜೊತೆಯಲ್ಲಿ

ನಾನಾ ಬಗೆಯ ಲೀಲಾವಿಲಾಸದ ಜಂಗಮತಿಂಥಿಣಿ, ಅನೇಕ ಭಕ್ತ ಮಾಹೇಶ್ವರರ ಸಂತೋಷ ಸಡಗರ, ಸುತ್ತಲೂ "ವ್ಯೋಮಕೇಶ ಭವ ವಿನಾಶ। ಸ್ವಾಮಿ ಪೊರೆಯೋ ಗುರುಮಲ್ಲೇಶ.... ...." ಎಂದು ಹಾಡು ತ್ತಿದ ಮರಿದೇವರುಗಳ ಗುಂಪು, ಈ ಎಲ್ಲಾ ಸಂಭ್ರಮದಿಂದ ಒಡಗೂಡಿ ಬರುತ್ತಿದ್ದ ಸ್ವಾಮಿಯ ಸೊಬಗೆಂದರೆ ಆಗಿನ ಕಾಲದಲ್ಲಿ ಗಜಕ್ಕೆ ಕೇವಲ ಮೂರೇ ಆಣೆಯ ಬೆಲೆಯುಳ್ಳ ಸೋಲಾಪುರದ ಕರಿ ಚಕ್ಕು ಇದರ ತುಂಬು ತೋಳಿನ ಅಂಗಿ. ಲಪ್ಪಟೆ ಚೆಡ್ಡಿ, ತಲೆಯ ಮೇಲೆ ಕುಪಾಲಿ. ನಿಜಶೀರ್ಷ ದಿಕ್ಕೆಡೆಯಲ್ಲಿ ಇಳಿಯ ಬಿಟ್ಟ ಬಿಳಿಯೊಂದು ಟವಲ್, ಮಂಗಲಗಿರಿ ಚೌಕ ವೊಂದು ಕೈಯಲ್ಲಿ, ಮುಂಜೋಕೆಗೊಡುವ ಪವಿತ್ರ ಪಾದರಕ್ಷೆಗಳನ್ನು ಮೆಟ್ಟಿ, ಲಲಾಟದಲ್ಲಿ ಧವಳ ಕಾಂತಿಯುತ ತ್ರಿರೇಖೆ ಭಸಿತವನ್ನಿಟ್ಟು, ಕಂಠದಲ್ಲಿ ರುದ್ರಾಕ್ಷಿ ಮಾಲೆಗಳಳವಟ್ಟು, ಅತಿಕೃಶವೂ ಅಲ್ಲದ, ಸ್ಥೂಲವೂ ಅಲ್ಲದ ಗೌರವ ಕಾಯದ, ಪಾರಮಾರ್ಥಿಕ ಮಹಾಮೋಹಕ ಪರಾತ್ಪರ ವಸ್ತುಸ್ವರೂಪವಾದ ಮಂಗಳಕರ ಮಂತ್ರಮೂರ್ತಿ ಮಹಾಲಿಂಗ ಲೀಲಾ ವಿಲಾಸವಾಗಿ ಪರಿಶೋಭಿಸುತ್ತಾ ಬರುತ್ತಿದ್ದರು ದೊರೆ ಇದ್ದೆಡೆಗೆ. ಭಕ್ತರು 'ಅಲಕ್ ನಿರಂಜನ ಗುರುಮಲ್ಲೇಶ ಮಹಾಪ್ರಭೋ, ಶ್ರೀರ್ಮ ನಿರಂಜನ ಭಿಕ್ಷೇಶ ಮಹಾಸ್ವಾಮಿ ಭೋಪರಾಕ್'! ಎಂಬ ಜಯಘೋಷದೊಡನೆ ಪ್ರವೇಶಿಸಿತು. ಥಟ್ಟನೆದ್ದು ನಿಂತು ಪೀಠವನ್ನಿತ್ತು, ಅಚ್ಚರಿಯ ಲೀಲಾ ಸ್ವರೂಪನನ್ನು ಬೆರಗುವಡೆದು ನಮಸ್ಕರಿಸಿದ ರಾಜರನ್ನು ನೋಡಿ ಶ್ರೀ ಗುರುವು ಕುಳಿತುಕೊಳ್ಳಲು ಹೇಳಿದರು! ನೆರೆದಿದ್ದವರೆಲ್ಲಾ ನಿಶ್ಯಬ್ದದಿಂದ ಮುಗಿದ ಕೈಯಾಗಿ ಕುಳಿತು, ಅನಿಮಿಷ ದೃಷ್ಟಿಯಿಂದ ಸ್ವಾಮಿಯನ್ನೇ ನೋಡುತ್ತಿರಲು, ಸಕಲ ಪೂಜೋಪಕರಣಗಳಿಂದೊಡಗೂಡಿ ಅಷ್ಟವಿಧ ಷೋಡಶೋಪಚಾರದಿಂದರ್ಚಿಸುವ ಅಕಳಂಕ ಶರಣನ ಕರಕಮಲ ಮಧ್ಯ ದಲ್ಲಿ ರಾರಾಜಿಸುವ ಪರಮೇಷ್ಟ ಲಿಂಗದಂತೆ ಕಾಣುತ್ತಿದ್ದರು. ಶ್ರೀ ಗುರು ಭಿಕ್ಷದಾರ್ಯ ಮಹಾಸ್ವಾಮಿಯವರು ಮಹಾರಾಜರನ್ನು ಕುರಿತು "ಐಯ್ಯಾಜಿ! ನೀವು ನಿಮ್ಮ ಕುಟುಂಬದವರೆಲ್ಲಾ ಕ್ಷೇಮವೆ?" ಎನ್ನಲು ದೊರೆಯು, "ಸ್ವಾಮಿಯ ಕೃಪೆಯಿಂದ ಎಲ್ಲರೂ ಕ್ಷೇಮವೆ, ತಮ್ಮ ದಾಸೋಹದ ಮಹತ್ಪ್ರಭಾವವನ್ನು ಆಗಿಂದಾಗ್ಗೆ ಕೇಳಿ ಸಂತೋಷ

ಗೊಂಡು ಬಹಳ ದಿನಗಳಿಂದಲೂ ನೋಡಬೇಕೆಂದು ಹಾತೊರೆಯುತ್ತಿದ್ದ ನನ್ನ ಮನಸ್ಸು ಇಂದಿಗೆ ಶಾಂತವಾಯಿತು, ಇಂದೊದಗಿದ ತಮ್ಮ ಸಂದರ್ಶನಕ್ಕೆ ಪಾತ್ರನಾದ ನಾನು ಧನ್ಯ," ಎಂದು ನುಡಿದರು. ಶ್ರೀ ಭಿಕ್ಷದ ಪ್ರಭುವು "ಎಲ್ಲವನ್ನೂ ಚಿನ್ನದ ಕಲಶದಯ್ಯ ಮಾಡಿಸಿಕೊಳ್ಳುತ್ತಾನೆ ಬಿಡ್ರಿ, ನಾವೇನು ಮಾಡೋದು, ನೀವಾದರೂ ನಿಮ್ಮ ಹಿಂದಿನ ಜನ್ಮದ ಪುಣ್ಯ ವಿಶೇಷದಿಂದ ಮಹಾರಾಜರಾಗುದಿಸಿದ್ದೀರಿ, ನಿಮಗೀ ಭೋಗವನ್ನು ಶಿವನು ಕೊಟ್ಟಿದ್ದಾನೆ, ಇನ್ನುಮುಂದೆಯೂ ಸರ್ವಜೀವ ದಯಾಪರರಾಗಿ ಸತ್ಯದಿಂದ ನಡೆದುಕೊಳ್ಳಿ, ನಿಮಗೆ ಶ್ರೇಯೋಲಾಭವಾಗುತ್ತದೆ," ಎಂದರು. ಆದಕ್ಕೆ ದೊರೆಯವರು "ತಮ್ಮ ಮಹದಾಶೀರ್ವಾದವಿದ್ದಂತೆಯಾಗಲಿ, ಈವಾಗ ನನ್ನಿಂದ ಏನಾದರೂ ಸ್ವಾಮಿಗೆ ಸೇವೆ ಸಲ್ಲಿಸುವಂತೆ ಆಜ್ಞೆಯಾಗಬೇಕು," ಎಂದು ಬಿನ್ನೈಸಿಕೊಂಡರು. "ಇಲ್ಲಾ ಐಯ್ಯಾಜಿ! ನೀವು ನನಗೆ ಕೊಡೋದನ್ನು ನಿಮ್ಮ ಪ್ರಜೆಗಳಿಗೆ ಉಪಯೋಗಿಸಿಕೊಳ್ಳಿ, ನನಗೆ ನಮ್ಮ ಭಕ್ತರು ಕೋಡೊದೆ ಮುಗೀದ್ಹಾಗಿದೆ" ಎನ್ನಲು, "ಗುರುವೆ ನಮ್ಮರಮನೆಗಾದರೂ ಒಂದು ದಿನ ಚಿತ್ತೈಸಿ; ಈ ನಿಮ್ಮ ಬಟ್ಟೆಗಳನ್ನು ತೆಗೆದುಬಿಡಿ, ನಾನು ನಿರಾಜಿ ಉಡುಪುಗಳನ್ನು ಕಳಿಸಿಕೊಡುತ್ತೇನೆ; ತಾವು ಧರಿಸಿ ದಯಮಾಡಿಸಬೇಕು" ಎಂದರು. "ಹಾಗಾದರೆ ಐಯ್ಯಾಜಿ, ಇನ್ನೂ ಸ್ವಲ್ಪದಿನ ಸುಮ್ಮನೇ ಇರಿ. ಈಯಂಗೀ ಈಯಂಗೀ ಎರಡನ್ನೂ ತೆಗೆದುಬಿಡ್ತೇನೆ ಆಮೇಲೆ ಬರೋದಾಗಲಿ" ಎಂದು ತಮ್ಮ ಬಲಗೈಯಿಂದ ಆನರನ್ನು ಮುಟ್ಟಿ, ಎಡಗೈಯಿಂದ ಅಂಗಿ ಬಟ್ಟೆ ಎರಡನ್ನೂ ತೋರಿ ಸುಮ್ಮನಾದರು. ಸಭೆಯು ಅಲಕ್ ನಿರಂಜನ ಗುರುಮಲ್ಲೇಶ ಮಹಾಪ್ರಭೋ. ಶ್ರೀಮರ್ಮ ನಿರಂಜನ ಭಿಕ್ಷೇಶ ಮಹಾಸ್ವಾಮಿ ಭೋ ಪರಾಕ್ ಎಂದು ಜಯಘೋಷ ಮಾಡಿತು. ದೊರೆಯು ಸ್ತಬ್ಧರಾಗಿ ಎಂಥಾ ಆಶಾರಹಿತರು! ಎಂದು ಆಶ್ಚರ್ಯಭರಿತರಾಗಿ ಜಗದ ಭೋಗೋಪಭೋಗಗಳನ್ನೆಲ್ಲಾ ತ್ಯಾಗಮಾಡಿರುವ ಈ ನಿರಾಭಾರಿಗಳಿಗೆ ಕರತಳಾಮಳಕವಾಗಿ ಹರನಿರಲು ನರರ ಹಂಗೇನು ಎಂದು ಮರುಮಾತನಾಡಲೇನೂ ಇಲ್ಲದೆ ಶಬ್ದಮುಗ್ಧರಾದರು. ಸ್ವಾಮಿಯು ಎದ್ದು, "ಬರುತ್ತೇನೆ ಐಯ್ಯಾಜಿ" ಎಂದು ಮಠಕ್ಕೆ ಬಂದುಬಿಟ್ಟರು.

ಹೀಗೆಯೇ ಗುರುಕಾರ್ಯ ನಡೆದುಕೊಂಡು ಹೋಗುತ್ತಿದ್ದಾಗ ಒಂದು ದಿನ ರಾತ್ರಿ ಮೈಸೂರಿನಲ್ಲಿ ಮೊಸರನ್ನದೆಡೆಯ ಚಿಕ್ಕಲಿಂಗಮ್ಮ ನವರು ನಿದ್ರಿಸುತ್ತಿದ್ದಾಗ ಸ್ವಪ್ನದಲ್ಲಿ ಶ್ರೀ ಗುರುಮಲ್ಲ ಚಿನ್ಮಯನು ಮೈದೋರಿ, ಚಿಕ್ಕಲಿಂಗವ್ವಾ, ನನಗೀಗ ಮೊಸರನ್ನದ ಬಯಕೆಯಾಗಿ ಬಿಟ್ಟಿದೆಯಲ್ಲವ್ವಾ, ಏನು ಮಾಡುವೆ? ಎಂದು ಅದೃಶ್ಯವಾದಂತಾಯಿತು. ಥಟ್ಟನೆ ಕಣ್ಣು ಬಿಟ್ಟು ಎದ್ದು ದೀಪವನ್ನು ಹಚ್ಚಿ ಗಾಬರಿಯಾಗಿ ನನ್ನಯ್ಯಾ ಎಂದು ಅತ್ತಿತ್ತನೋಡಿ ಅಳುತ್ತಾ ನಿರ್ಭಾಗ್ಯಳಾದ ನನಗೆ ಕನಸಿನಲ್ಲಿ ಕಾಣಿಸಿಕೊಂಡು ಕರ್ಮಚಕ್ಷುವಿಗೆ ಬಯಲಾದೆ ಏಕೆ? ನೀನು ಆಗಿದ್ದೂ ಈಗಿಲ್ಲವೆ ತಂದೆ? ಎಂದು ದುಃಖದಿಂದ ಹಂಬಲಿಸುತ್ತಿದ್ದು ರಾತ್ರಿಯನ್ನು ಕಳೆದು ಸೂರ್ಯೋದಯಕ್ಕೆ ಮುನ್ನವೇ ಸ್ನಾನ ಶಿವಾರ್ಚನೆಯನ್ನು ತೀರಿಸಿಕೊಂಡು, ದೇವನೂರಿಂದ ಭಿಕ್ಷದ ಗುರುಗಳನ್ನು ಕರೆಯಿಸಿಕೊಂಡು ಏನಪ್ಪಾ ಗುರುವೇ, ಸ್ವಾಮಿಗೆ ಎಡೆ ಏನ್ಮಾಡ್ತೀರಿ ಎಂದು ಕೇಳಲು ಭಿಕ್ಷದ ಗುರುವು ಮಧ್ಯಾಹ್ನ ಸಾಯಂಕಾಲ ಎರಡುಹೊತ್ತು ತುಪ್ಪ ಅನ್ನದ ಎಡೆ ಮಾಡ್ತೀವಿ ಕಣವ್ವಾ, ಅದೇಕೆ? ಎಂದರು. ಅಪ್ಪಾ ನನ್ನ ಪ್ರಭು ಇಲ್ಲಿದ್ದಾಗ ಪ್ರತಿನಿತ್ಯ ಪ್ರಾತಃಕಾಲ ಮೊಸರು ಅನ್ನದ ಎಡೆಯನ್ನು ಸಲಿ ಸುತ್ತಿದ್ದರು; ರಾತ್ರಿ ನನ್ನ ಸ್ವಪ್ನದಲ್ಲಿ ಚಿನ್ಮಯನು ಮೈದೋರಿ ಮೊಸರು ಅನ್ನದ ಬಯಕೆ ಕಣಮ್ಮ ನನಗೆ ಅಂತ ಅಪ್ಪಣೆ ಕೊಟ್ಟರು. ಅದಕ್ಕೆ ನೀವೂ ಇನ್ಮೇಲೆ ಬೆಳಗ್ಗೆ ಪೂಜೆಯಾದ ತಕ್ಷಣ ಮೊಸರು ಅನ್ನದ ಎಡೆ ಮಾಡಿ. ಅನಂತರ ನೀವು ಮಾಡೋದನ್ನು ಮಾಡ್ಕೊಳ್ಳಿ, ನಾನಿರೋವರೆ ವಿಗೂ ಆ ಎಡೆಗೆ ಆಗೋ ಅಕ್ಕಿಯನ್ನು ನಾನು ಕಳ್ಸಿಕೊಡ್ತೇನೆ, ಈ ನನ್ನ ಬಿನ್ನಪವನ್ನು ನೀವು ಯಾವಾಗಲೂ ನಡೆಸಿಕೊಡಬೇಕು, ಗುರುವೇ ನೀವೇ ಅವರಾಗಿ ಬಂದಿದ್ದೀರಿ ಎಂದು ಚಿಕ್ಕಲಿಂಗಮ್ಮಯ್ಯನು ಬಿನ್ನೈಸಿ ಕೊಳ್ಳಲು, ಶ್ರೀ ಭಿಕ್ಷದಪ್ಪನವರು "ಅರಿಯದವನಿಗೆ ಎಚ್ಚರಿಕೆ ಕೊಟ್ಟೆ ನನ್ನವ್ವಾ" ಎಂದು 'ಮಾಡ್ತೇನೆ, ನನ್ನ ಹಿರಿಯಳಾದ ನಿನ್ನ ಹಿರಿಯಾಸೆ ಯನ್ನು ಶಿರಸಾವಹಿಸಿ ಬಿಡದೆ ನಡೆಸಿಕೊಂಡು ಹೋಗುತ್ತೇನೆ' ಎಂದು, ಅಂದು ಮೊದಲು ಮೂರು ವೇಳೆಯೂ ಎಡೆ ಮಾಡುವ ನಿಯಮವಾ ಯಿತು.

ಒಮ್ಮೆ ಶ್ರೀಮಠದಲ್ಲಿ ಮಹಾನೈವೇದ್ಯಕ್ಕೆ ದಪ್ಪಅಕ್ಕಿಯ ಅನ್ನವನ್ನು ಎಡೆ ಮಾಡಿಬಿಟ್ಟಿದ್ದಾರೆ. ಭಕ್ತಾನುಗ್ರಹ ಕಾರ್ಯ ಕಲಾಪಗಳ ನಿಮಿತ್ತ ಗ್ರಾಮಾಂತರ ಪ್ರದೇಶದಲ್ಲಿದ್ದ ಶ್ರೀ ಗುರು ಭಿಕ್ಷೇಶ ಪ್ರಭುವಿಗೆ ರಾತ್ರಿ ಸ್ವಪ್ನ ದಲ್ಲಿ ನಿತ್ಯ ನಿರಂಜನ, ಕರ್ತೃ ಗುರುಮಲ್ಲೇಶ ಮಹಾಪ್ರಭುವು ಅರ್ಧ ರಾತ್ರಿ ಸಮಯದಲ್ಲಿ ಪ್ರತ್ಯಕ್ಷವಾಗಿ, ಭಿಕ್ಷದಪ್ಪಾ ನೀನು ಹಳ್ಳಿಗಳ ಸಂಚಾರ ಮಾಡುತ್ತಾ ಭಕ್ತರ ವೈಭವದಲ್ಲಿದ್ದು ಬಿಡುತ್ತೀಯೆ ನನಗೆ ಅಲ್ಲಿ ಮಠದಲ್ಲಿರು ವವರು ದಪ್ಪಕ್ಕಿಯ ಅನ್ನವನ್ನು ಎಡೆ ಮಾಡಿಬಿಡುತ್ತಾರೆ, ನನ್ನಿಂದ ಉಣ್ಣಲು ಸಾಧ್ಯವಿಲ್ಲ, ನೀನಿದನ್ನು ನೋಡ್ಕೊಳ್ಳಾರದೆ ಎಂದು ಅದೃಶ್ಯ ವಾಗಲು, ಕಾತರದಿಂದೆದ್ದು, ಅಪರಾಧ ನನ್ನದು ಮನ್ನಿಸಯ್ಯಾ ಎಂದಾ ಗಲೇ ಗಾಡಿಕಟ್ಟಿಸಿಕೊಂಡು ಬೆಳಗಾಗುವುದರೊಳ ಮಠಕ್ಕೆ ಬಂದು ಅಡುಗೆ ಯವರನ್ನು ಕರೆದು ನಿನ್ನೆ ಎಡೆಗೆ ಅಕ್ಕಿ ಯಾವುದನ್ನು ಹಾಕಿದ್ದಿರೊ ? ಕರೆಯೋ ಉಗ್ರಾಣದವನನ್ನು ಎಂದು ಕರೆಸಿ ಯಾಕೋ ಮಹಾನೈವೇ ದ್ಯಕ್ಕೆ ದಪ್ಪಕ್ಕಿ ಕೊಡ್ತೀಯೆ ? ಎಚ್ಚರಿಕೆ ! ಇನ್ನೆಂದಾದರೂ ಕೊಟ್ಟೀಯೆ ಜೋಕೆ ! ಯಾವಾಗಲೂ ಮಹಾಸ್ವಾಮಿಯ ಮಹಾ ನೈವೇ ದ್ಯಕ್ಕೆ ಸಣ್ಣ ಅಕ್ಕಿಯ ಅನ್ನವನ್ನೇ ಎಡೆ ಮಾಡಬೇಕು, ಎಂದಾಜ್ಞೆಗೈದ ಭಿಕ್ಷದಪ್ಪಗಳು ಕನಸು ಮನಸಿನಲ್ಲೆಲ್ಲಾ ಚಿನ್ನದ ಕಲಶದಪ್ಪನೇ ಆಗಿ ದಿನದಿನಕ್ಕೂ ಘನವಾಗುತ್ತಾ ಬಂತು ಅವರ ಮಹಾ ದಾಸೋಹ.



# ಅಧ್ಯಾಯ ೬

ಶ್ರೀಮದ್ ನಿರಂಜನ ಗುರುಮಲ್ಲೇಶ ನಿಜತತ್ವ ನಿಧಿ ನಿಕ್ಷೇಪಗಳ ಹೃದಯಾಂತರಾಳದಂತಿದ್ದ ಶ್ರೀ ಭಿಕ್ಷದ ಗುರುಮೂರ್ತಿಯು ಸಕಲ ಭಕ್ತ ಮಾಹೇಶ್ವರರ ಕರ್ತೃವಾಗೊಪ್ಪಿರಲು ಶ್ರೀಮಠದ ಒಳಾಡಳಿತದಲ್ಲಿ ಶ್ರೀಗುರು ಸಿದ್ಧಪ್ಪನವರು, ಶ್ರೀ ಗದ್ದುಗೆ ಪೂಜೆಯಲ್ಲಿ ಶ್ರೀ ತೋಂಟದಾರ್ಯ ಮಹಾ ಸ್ವಾಮಿಗಳು, ಶ್ರೀ ಮಠದ ಮತ್ತು ಶಾಖಾ ಮಠಗಳ ಕಟ್ಟಡದ ಕಾರ್ಯ ಭಾರದಲ್ಲಿ ಶ್ರೀ ಶಿವಪ್ಪ ಮಹಾಸ್ವಾಮಿಯವರು, ಶ್ರೀ ಕಂಥೇ ಭಿಕ್ಷದಲ್ಲಿ ಶ್ರೀ ದ್ವಂದ್ವಪ್ಪ ಮಹಾಸ್ವಾಮಿಗಳವರು, ಇನ್ನುಳಿದ ಕಾರ್ಯಗಳ ಲ್ಲೊಬ್ಬೊಬ್ಬರು ಹೀಗೆ ಶ್ರದ್ಧೆಯಿಂದಿರುತ್ತಿರಲು, ಎಲ್ಲೆಲ್ಲೂ ಶಾಂತಿ ವಾತಾ ವರಣದಿಂದೊಪ್ಪಿ ಎಲ್ಲವೂ ಸುಭಿಕ್ಷವಾಗಿತ್ತು. ನೈಜವಾಗಿ ಆಧ್ಯಾತ್ಮಿಕ ತತ್ವ ಕೇಂದ್ರೀಕೃತಗೊಂಡ ಸ್ಥಾನವೆಂದರೆ ದೇವನೂರು ಮಠವೆಂದು ಎಲ್ಲಿಯವರೆಗೂ ಡಂಗೂರ ಮೂಲಕ ಸಾರಿಹೇಳುವ ಶಬ್ದ ಕೇಳಿ ಬರುತ್ತಿತ್ತು. ಮೂಲೋಕದೊಡೆಯ ಮಹಾ ಮುಕ್ತಿನಾಥ ಗುರುಮಹತ್ವದ ಗೊತ್ತು ನಿಶ್ಚಿತವಾಯಿತು. ಲಿಂಗ ಲೋಲುಪ್ತತೆಯ ಸಂಗಸಾಮರಸ್ಯವು ಮಂಗಳ ಕರವಾಗಿ ಕಂಗೊಳಿಸುತ್ತಿತ್ತು. ಭಕ್ತಿಯ ವೈಶಿಷ್ಟ್ಯದಿಂದ ಜಂಗಮ ತೃಪ್ತಿಯ ಪರಿಣಾಮ ಅತ್ಯುನ್ನತ ವೈಭವದಿಂದ ಅನುಪಮವಾಗಿ ವ್ಯಕ್ತ ಪಡಿಸುತ್ತಿತ್ತು,

ಒಮ್ಮೆ ಶಿಷ್ಯಾರ್ಜನೆಯ ಪ್ರವಾಸದಲ್ಲಿ ಸಾಕ್ಷಾತ್ ಗುರುಗಳವರು ಯಾವ ಕಡೆಯೋ ಸಂಚಾರ ಹೋಗಿರಲು ಇತ್ತ ಶ್ರೀಮಠದಲ್ಲಿ ಗುರು ಸಿದ್ಧಪ್ಪಸ್ವಾಮಿಗಳವರಿಗೂ ಶ್ರೀ ತೋಂಟದಾರ್ಯರವರಿಗೂ ವೈಮನಸ್ಸು ಬಂದು ಗುರುಸಿದ್ಧಪ್ಪನವರು ಶ್ರೀ ತೋಂಟದಾರ್ಯರನ್ನು ವಾಗಾರೋಪಿಸಿ ಮಠವನ್ನೆ ಬಿಟ್ಟು ಹೊರಡುವಂತೆ ಮಾಡಿಬಿಟ್ಟದ್ದರು. ಶಿವಪ್ಪ ಶ್ರೀಗಳ ವರು ಗುರುಗಳು ಬರುವವರೆಗೆ ಯಾರೂ ಏನೂ ಮಾಡುವಹಾಗಿಲ್ಲ

ಸುಮ್ಮನೆ ಗಂಭೀರವಾಗಿರಬೇಕೆಂದು ಸಮಾಧಾನಪಡಿಸಿದರು. ಅಷ್ಟಕ್ಕೆ ಗುರುಗಳು ದಯಮಾಡಿ ವಿಷಯವನ್ನು ಕೇಳಿ ಶ್ರೀ ತೋಂಟದಪ್ಪನವರನ್ನು ಇನ್ನುಮೇಲೆ ಧಾನ್ಯದ ಭಿಕ್ಷ ಮಾಡುಹೋಗು ಎಂದು ಹೇಳಿದರು. ಅಂದಿನಿಂದ ಇಂದುವಾಡಿ ಶ್ರೀಮತಿ ರೇವಮ್ಮನವರ ಮಕ್ಕಳು ಶ್ರೀ ಗುರುಸ್ವಾಮಿಯವರು ಗದ್ದುಗೆ ಪೂಜೆಮಾಡಲಾರಂಭಿಸಿದರು. ಅದೇ ಶ್ರೀ ಗುರುಸ್ವಾಮಿಯವರಿಗೆ ಅವರ ಸೋದರದತ್ತೆ ಮಗಳು ಅಂದರೆ ಶ್ರೀ ಗುರುಸಿದ್ಧಪ್ಪನವರ ಮಗಳು ಶ್ರೀಮತಿ ಶಿವಲಿಂಗಮ್ಮನವರನ್ನು ವೈಭವಪೂರಿತವಾಗಿ ಯಾವ ಲಕ್ಷಾಧೀಶ್ವರರೂ ಮಾಡಲಾರದಂಥಾ ವಿವಾಹವನ್ನು ಮಹಾಸ್ವಾಮಿಯವರು ಮಾಡಿದರು.

ಒಮ್ಮೆ ಆಶ್ವೀಜಮಾಸದಲ್ಲಿ ಕೆಲವು ಪ್ರದೇಶದಲ್ಲಿ ಮಳೆ ಇಲ್ಲದೆ ಪೈರು ಫಸಲು ಒದಗುವ ಸಂದರ್ಭದಲ್ಲಿ ಕೆರೆಕಟ್ಟೆಗಳಲ್ಲಿ ನೀರಿಲ್ಲದೆ ಬಹಳ ತೊಂದರೆಯಾಯಿತು. ನಮ್ಮೀ ಕರುಣಾಳು ಶ್ರೀ ಗುರು ಭೀಕ್ಷದ ಮಹಾಸ್ವಾಮಿಯು ಪ್ರವಾಸ ಹೋಗಿ ಕೊಡಗಾಪುರ ಗ್ರಾಮಕ್ಕೆ ದಯಮಾಡಿಸಿದ್ದಾರೆ. ಕೊಡಗಾಪುರವೆಂದರೆ ಗುರುಗಳಿಗೆ ಅಷ್ಟು ಪ್ರೀತಿ. ಅಲ್ಲಿಯ ಭಕ್ತರ ಭಕ್ತಿಯೂ ಸಡಗರವೂ ಅಷ್ಟೇ. ಗುರುಗಳ ಗಾಡಿ ಸವಾರಿ ಬಂತೆಂದರೆ ಸ್ಫೂರ್ತಿಯಿಂದ ಊರಿನ ಎಲ್ಲಾ ಗಂಡಸರು, ಹೆಂಗಸರು, ಹುಡುಗರು, ಮಕ್ಕಳೆಲ್ಲಾ ಓಡಿಬಂದು ಎದುರುಗೊಂಡು ಕರ್ಪೂರ ಹಚ್ಚಿ ದೀರ್ಘದಂಡನಮಸ್ಕಾರ ಮಾಡಿ ಭಜನೆ ಸಹಿತ ಬಹಳ ಉತ್ಸುಕತೆಯಿಂದ, ಕರೆದುಕೊಂಡು ಬರುವ ಪದ್ಧತಿ. ಒಂದು ಗೊತ್ತಾದ ಮನೆಯಲ್ಲಿ ಇಳಿದುಕೊಂಡು, ಕುಳಿತು ಎಲ್ಲರ ಯೋಗಕ್ಷೇಮವನ್ನೂ ವಿಚಾರಿಸುತ್ತಿರುವಲ್ಲಿ ಮಳೆ ಇಲ್ಲದೆ ಫಸಲೆಲ್ಲಾ ಒಣಗುತ್ತಿವೆ, ದನಕರುಗಳಿಗೆ ಕುಡಿಯೋದಿಕ್ಕೆ ನೀರಿಲ್ಲದಿದ್ದ ಚಿಂತೆಯೊಂದೇ ಗುರುವೆ ಎಂದು ಭಕ್ತರು ಆರ್ತಧ್ವನಿಯಿಂದ ತಿಳಿಸಿದರು. ಕನಿಕರದಿಂದ, " ಶಿವನ ಕರುಣವಿದ್ದರೆ ಆಗ್ತದೆ ಬಿಡ್ರಯ್ಯ " ಎಂದೆದ್ದು ಸ್ನಾನ ಶಿವಾರ್ಚನೆಯನ್ನು ಮುಗಿಸಿ ಸ್ವಲ್ಪಹೊತ್ತು ಭಜನಾನಂದ ಲೋಲುಪ್ತರಾಗಿದ್ದು ಮಲಗಿದರು. ಇತ್ತ ಬೆಳಗಿನ ಸ್ನಾನಕ್ಕೆ ಅಣಿಮಾಡುತ್ತಾ ನಿಶ್ಶಬ್ದವಾಗಿ ಅನೇಕ ಜನ ಭಕ್ತರು ಮನೋಹರ್ಷದಿಂದ ನಾಮುಂದು

ತಾಮುಂದು ಎಂದು ನೀರು ಸೇದಿ ತುಂಬುವವರು, ಸೌದೆ ತಂದು ಹಾಕು
ವವರು, ಎಣ್ಣೆ ಸೀಗೆಕಾಯಿಯನ್ನು ಸಿದ್ಧಮಾಡುವವರು, ಬೇಕಾದ ಪಾತ್ರೆ
ಮುಂತಾದವುಗಳನ್ನು ಸಿದ್ಧಮಾಡಿ ಕೊಡುವವರು, ಹೂವು ಪತ್ರೆಗಳನ್ನು
ಎತ್ತಿ ತರುವವರು, ಹೀಗೆ ನಿದ್ರೆಯ ಹಂಗನ್ನೇ ತೊರೆದು ಸೇವೆ ಮಾಡುವಷ್ಟು
ಆಸೆ ಎಲ್ಲರಿಗೂ. ಮಹಾಗುರುವಿನ ಮಹಿಮಾವಳಿಯನ್ನು ಗುಸುಗುಸು
ಪಿಸುಪಿಸು ಹೊಗಳುತ್ತಾ ಕೈಸನ್ನೆ ಬಾಯ್ಸನ್ನೆಯಲ್ಲಿರುತ್ತಿರಲು, ಮೊದಲು
ಕಂಜಿನ ಬಟ್ಟಲನ್ನು ಬೆಳಗಿಬಿಟ್ಟಂತಿದ್ದ ಆಕಾಶದಲ್ಲಿ ಈಶಾನ್ಯ ದಿಕ್ಕಿನಲ್ಲಿ
ಒಂದು ಸಣ್ಣ ಕಲಶದ ಮೋಡವೆದ್ದು, ಥಳಥಳನೆ ಮಿಂಚುಹೊಳೆದು,
ಕ್ಷಣಾರ್ಧದಲ್ಲಿ ಪ್ರಸರಿಸಿ ಗುಡುಗು ಸಿಡಿಲಾರ್ಭಟಗಳಿಂದ ಭೋರ್ಗರೆದು
ಸುರಿಯುತ್ತಾ ಬಂದ ಮಳೆ ಭರಣಿಯ ಮುಸುಕಿಟ್ಟಂತೆ ಧರಣಿಯನ್ನೆಲ್ಲಾ
ಮುಚ್ಚಿಬಿಟ್ಟಿತು. ಅನಿರೀಕ್ಷಿತವಾಗಿ ಶುರುವಾದ ಮಳೆಯ ರಭಸಕ್ಕೆ
ಮಹಾದ್ಭುತಗೊಂಡು, ಇದು ಮನದೊಲ್ಲಭನ ಘನ ಲೀಲೆ ಎಂದು
ಕೊಂಡಾಡಿದರೆಲ್ಲರೂ. ಬೆಳಗಿನ ಮೂರು ಘಂಟೆಗೆ ಮುನ್ನವೇ ಎದ್ದು
ಶೌಚಾಚಮನ ತೀರಿಸಿ ಬಂದು ಕುಳಿತ ಮಹಾಸ್ವಾಮಿಗೆ ಮಹಾಭಕ್ತಿ
ಪರವಶತೆಯನ್ನುಳ್ಳ ಶರಣೆಯರು ಎಣ್ಣೆ ಕಾಯಿಸಿ ತಂದು ಅಂಗಾಂಗ
ಕ್ಕೆಲ್ಲಾ ತಿಕ್ಕುತ್ತಿದ್ದರು. ಸ್ವಾಮಿಯ ಅಧೋದ್ವಾರದಲ್ಲಿ ಯಾವಾಗಲೂ
ಸ್ವಲ್ಪ ಘಾಯವಿದ್ದಿತು. ಇದಕ್ಕೆ ಕಾಳಿಂಗನ ಎಲೆಗೆ ಎಣ್ಣೆ ಸವರಿ ಕಾಯಿಸಿ
ಕಟ್ಟುಸುತ್ತಿದ್ದರು. ಭವರೋಗ ವೈದ್ಯನಾಗಿ ಬಂದಿರುವ ಈ ಮಾಯ
ಕಾರನಿಗೆ ಈ ಒಂದು ನೋವನ್ನು ಹೋಗಲಾಡಿಸಿಕೊಳ್ಳಲು ಆಗುವುದಿಲ್ಲ
ವೇನ್ರೋ ಎಂದು ಎಣ್ಣೆ ತಿಕ್ಕುವವರ ಮನದಲ್ಲಿ ಅನಿಸಿತು. ಆಗಲೆ
ನೋಡ್ರೋ! ಈ ಭಿಕ್ಷದಯ್ಯ ತನ್ನಂಗೀನೂ ಚಿನ್ನದ ಕಲಶದಯ್ಯನವ
ಎಂದ, ಚೆಡ್ಡಿ ಕುಪಾಲಿ ಎಲ್ಲವನ್ನೂ ಚಿನ್ನದ ಕಲಶದಯ್ಯನದು ಅಂದ
ಅಭಿಮಾನಕ್ಕೆ ಈ ಕೌಪೀನ ನನ್ನದು ಎಂದುದಕ್ಕೆ ಈ ನೋವು ಕೊಟ್ಟಿ
ದ್ದಾನೆ, ಅದೇನು ಮಾಡುತ್ತೆ ? ಹಾಗೆ ಇರಲಿ ಹಾಕು, ಎಂದುಬಿಟ್ಟರು
ಇವನ್ನು ಕೇಳಿದಾಗಲೇ ಅವರ ವಿಷಯದಲ್ಲಿ ಯಾರೂ ಏನೂ ಮಾತನಾಡ
ಲಾಗುತ್ತಿರಲಿಲ್ಲ, ಮನದಲ್ಲೂ ಪರಿಗಣಿಸಲಾಗುತ್ತಿರಲಿಲ್ಲ. ವಾಙ್ಮನೋತೀ

ನೆಂದು ಸಕ್ಕರೆಯನ್ನು ಮೆದ್ದ ಮೂಕರಂತಾಗಿ ಬಿಡುತ್ತಿದ್ದರು ಭಕ್ತರೆಲ್ಲರೂ. ಸರಿ, ಬೆಳಗಾಯಿತು, ಮಳೆ ಒಂದೇಸಮನೆ ಸುರಿಯುತ್ತಿದೆ, ಎಲ್ಲರೂ ಮುಖವನ್ನು ತೊಳೆದು ಭಸ್ಮಧಾರಿಗಳಾಗಿ ಬಂದು ನಮಸ್ಕರಿಸಿ ನಿಂತು ಕೊಂಡಿದ್ದಾರೆ. ಊರಿನಲ್ಲೆಲ್ಲಾ ಮಳೆಯ ಅವಾಂತರವನ್ನು ತಾಳಲಾರದೆ ಹೊರಕ್ಕೆ ಕಾಲಿಡಲೂ ಸಾಧ್ಯವಿಲ್ಲದೆ, ಹಾಳುಮಳೆ ಹೂದರೆ ಹೂದು ಕೆಡಿಸುತ್ತದೆ, ಹೋದರೆ ಹೋಗಿ ಕೆಡಿಸುತ್ತದೆ ಏನಪ್ಪಾ ಇದು ಎನ್ನುತ್ತಿದ್ದರು. ಏನಯ್ಯಾ ಬೆಳಗೂ ಹೋಡಿತಲ್ವೆ ಮಳೆ ಎಂದು ಸ್ವಾಮಿಯು ನುಡಿಯಲು ಅಲ್ಲಿದ್ದವರೆಲ್ಲಾ ವಿಪರೀತವಾಗ್ಬಿಡ್ತು ಗುರುವೇ. ಕೆರೆಕಟ್ಟೆಗಳೆಲ್ಲಾ ಭರ್ತಿಯಾಗಿಬಿಟ್ಟು ಕೋಡಿ ಹರಿಯುತ್ತಿವೆ. ಯಾರು ಏನು ಮಾಡುವುದಕ್ಕೂ ಅವಕಾಶವೇ ಕೊಡ್ದೆ ಹೊಯ್ತಾನೇ ಇದೆ, ಹೀಗ್ಮಾಡಿದರೆ ಹ್ಯಾಗ್ತಾನೆ ಸಾಧ್ಯ! ಎನ್ನಲು, ಲೋಕಕ್ಕೆ ಮಳೆಯೇ ತೀರ್ಥ! ಬೆಳೆಯೇ ಪ್ರಸಾದ! ಅನ್ನೋದನ್ನು ಕಾಣ್ದೆ ಏನಯ್ಯಾ ಜನ ಸ್ವಲ್ಪ ಹೆಚ್ಚಾದರೂ ತಡ್ಕೊಳ್ಳಾರ್ರು, ಸ್ವಲ್ಪ ಕಮ್ಮಿಯಾದ್ರೂ ತಡ್ಕೊಳ್ಳಾರ್ರು ಅಲ್ವೆ? ಇಂಥ ಮಳೇನೇ ಬಯ್ಯೋ ಜನ ನಮ್ಮನ್ನು ಬಿಟ್ಟಾರೆಯೆ? ಎಂದೆದ್ದು ತೊಡೆಗಳನ್ನು ತಾವೇ ಸವರಿಕೊಳ್ಳುತ್ತಾ ಮಧ್ಯದ ಅಂಗಳಕ್ಕೆ ಬಂದು ನಿಂತು ಏನಪ್ಪಾ ಇಷ್ಟು ಕೋಪ ಎಂದು ಶಿರವೆತ್ತಿ ಸುತ್ತಲೂ ಮೇಲಕ್ಕೆ ನೋಡಿ ಸಾಕಲ್ವೆ, ಹಾ! ಲೋಕ ಬದುಕ್ತದೇನು? ಕೊಟ್ರೆ ನಿನ್ಗೇಟಿ ಸರ್ಬರ್ತದೆ! ಎಂದಾಕ್ಷಣವೇ, ಮನೇ ಸೂರಿನಿಂದ ಬೀಳುವ ಹನಿಯಲ್ಲದೆ ಆಕಾಶದಿಂದ ಒಂದು ತೊಟ್ಟುಕೂಡ ಹನಿ ಬಿದ್ದುದನ್ನು ಯಾರೂ ಕಾಣಲಿಲ್ಲ. ಆ ಕ್ಷಣವೇ ಮೋಡವೆಲ್ಲಾ ಹರಿದು ಆಕಾಶವು ನಿರ್ಮಲವಾಗಿ ಚಿತ್ರಭಾಕರನೆದುರಿನಲ್ಲಿ ಮತ್ತೆಂತು ಸುಳಿವೆನೆಂದು ಭಯದಿಂದ ಮೆಲ್ಲ ಮೆಲ್ಲನೆ ಬರುವಂತೆ ಮೂಡಣಿಂದ ಸೂರ್ಯೋದಯವಾಗಿ ಬರುತ್ತಲಿತ್ತು. ಜನರೆಲ್ಲಾ ಸಂತೋಷದಿಂದ ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಿದರು. ಶ್ರೀ ಗುರೋತ್ತಮನು ಸ್ನಾನಕ್ಕೆ ಚಿತ್ತೈಸಿದ ಸೊಬಗೇ ಸೊಬಗು. ಹೀಗೆ ತಮ್ಮ ಅಂತಃಕೃಪಾಶಕ್ತಿಯಿಂದ ಲೋಕವನ್ನು ಬೆಳಗುತ್ತಾ ಸಕಲರ ಸಂಶಯ ನಿವಾರಿಸುತ್ತ, ಶಿಷ್ಯಸಮೂಹವನ್ನು ಪ್ರಬಲಿಸುತ್ತಾ ಇರುತ್ತಿದ್ದರು.

ಮತ್ತೊಮ್ಮೆ ಶ್ರೀ ಮಠದ ದೊಡ್ಡ ಆರಾಧನೆ ಸಮಯದಲ್ಲಿ ಅಗಣಿತ ಜನಸಮೂಹ ಸೇರಿದುದರ ಮಧ್ಯೆ ಹಲಕೆಲವರಲ್ಲಲ್ಲಿ ಹಿಂದೆ ವಶಿಷ್ಠರಿಗೆ ಆರು ಸಾವಿರ ಜನ ಶಿಷ್ಯರು, ಅದರಲ್ಲಿ ಆರೇ ಜನರಿಗೆ ಮೋಕ್ಷವಾಯಿತು; ವಿಶ್ವಾಮಿತ್ರರಿಗೆ ಮೂರು ಸಾವಿರ ಜನ ಶಿಷ್ಯರು ಅವರಲ್ಲಿ ಮೂರೇ ಜನರಿಗೆ ಮೋಕ್ಷವಾಯಿತು ಅಂತ ಹೇಳ್ತಾರಲ್ಲ; ಈ ಭಿಕ್ಷದಪ್ಪನವರು ನಿಂತಿದ್ದವರು ಕುಂತಿದ್ದವರಿಗೆಲ್ಲಾ ವಿಭೂತಿ ಬಡಿದು ಕಳಿಸ್ತಾರಲ್ಲ ಇವರೆಲ್ಲರಿಗೂ ಮೋಕ್ಷವಾಗುತ್ತದೆಯೆ ಕಾಣೆ ಎಂದು ಮಾತಾಡಿಕೊಳ್ಳುತ್ತಿದ್ದರು. ಮಹಾಸ್ವಾಮಿಗೆ ಯಾರೂ ಇದನ್ನು ಹೇಳಿದವರಿಲ್ಲವಾದರೂ ಆ ಮಹಾಸಮೂಹದಲ್ಲಿದ್ದು ನಿಂತು "ಏನಯ್ಯ, ಇನ್ನೂ ಕಾಣಲಿಲ್ವೆ ಈ ಭಿಕ್ಷದಯ್ಯ ಸಾಸಂಪರ ವಂಶೀಕ ಅಂತ. ಏನನ್ನಾದರೂ, ಎಷ್ಟನ್ನಾದರೂ ತುಂಬಿದ ಎಷ್ಟೋ ರೈಲುಗಾಡಿಗಳನ್ನೆಲ್ಲಾ ಒಂದೇ ಎಂಜಿನ್ನಲ್ಲವೇನ್ರಿ ಎಳ್ಕೊಂಡ್ಹೋಗೋದು? ಸಾಕ್ಷಾತ್ ರೇಣುಕರ ಮಹಾಸನ್ನಿಧಿಯಲ್ಲಿ ವಶಿಷ್ಠ ವಿಶ್ವಾಮಿತ್ರ ಅಂತ ಯಾವ ಬಡಋಷಿ ಮಾತಾಡ್ತಿರೋದು? ನನ್ನೊಡೆಯ ಕೋಳಿ ಕೊತ್ತಿಗಳಿಗೆಲ್ಲಾ ಬಿತ್ತು ಅಂತ ಹೇಳಿದ್ದಾನೆ." ಎಂದಾಕ್ಷಣವೇ ಸಭೆಯೆಲ್ಲಾ "ಅಲಕ್ ನಿರಂಜನ ಗುರುಮಲ್ಲೇಶ ಮಹಾಪ್ರಭೋ," "ಶ್ರೀಮನ್ನಿರಂಜನ ಭಿಕ್ಷೇಶ ಮಹಾಸ್ವಾಮಿ ಭೋ ಪರಾಕ್," ಎಂದು ಜಯಘೋಷ ಮಾಡಿ ನಮಸ್ಕರಿಸಿತು. ಆ ಮಾತುಗಳನ್ನು ಆಡಿಕೊಳ್ಳುತ್ತಿದ್ದವರೆಲ್ಲಾ ಬೆಕ್ಕಸ ಬೆರಗಾಗಿ ಮೂಗಿನ ಮೇಲೆ ಬೆರಳಿಟ್ಟು ಏನಪ್ಪಾ, ನಾವು ಮಾತನಾಡಿಕೊಳ್ಳುತ್ತಿದ್ದ ನಮ್ಮ ಮನೋರೋಗಕ್ಕೆ ಮದ್ದು ಕೊಟ್ಟ, ಮನದೊಡೆಯ ಎಂಥಾವನಪ್ಪ ಎಂದು ಸ್ತಬ್ಧರಾದರು.

ಪರಾತ್ಪರನು, ಇನ್ನು ಲೋಕದಲ್ಲಿ ಎಷ್ಟು ಮಾಡಿದರೂ ಇಷ್ಟೇ; ಸಾಕಲ್ವೆ? ಇನ್ನು ಮರೆಯಾಗಿ ಬಿಡುವುದು ಸರಿ ಎಂದುಕೊಂಡು ಶ್ರೀ ಶಿವಪ್ಪಸ್ವಾಮಿಯವರನ್ನು ಕರೆದು, ಶಿವಪ್ಪಾ, ಇನ್ನು ನನ್ನಿಂದ ಸಾಧ್ಯವಿಲ್ಲ, ಶರೀರಕ್ಕೂ ಸ್ವಸ್ಥವಿಲ್ಲ, ನಾನು ಎಷ್ಟೋ ಸಾವಿರ ಜನ ಶಿಷ್ಯರನ್ನು ಮಾಡಿದೆ, ನನಗೆ ಒಬ್ಬರೂ ಕಾಣಲಿಲ್ಲ, ನೀನೊಬ್ಬನಿದ್ದೀಯೆ, ಇನ್ನು ನೀನು ಮಾಡು ಎಂದರು. ಶಿವಪ್ಪ ಶ್ರೀಗಳವರು ನಮಸ್ಕರಿಸಿ, ಗುರುವೇ!

ಅದನ್ನೀಗೆನಗೆ ಅಪ್ಪಣೆಕೊಡಬೇಡಿ ನಾನಿನ್ನೂ ಸೇವೆ ಮಾ ಡ ಬೇ ಕು ಅವನ್ನು ಅನಂತರ ಮಾಡುವುದಾಗಲಿ ಎಂದು ಮುಗಿದ ಕೈಯಾಗಿ ನಿಂತರು. ನಾನಿರುವಾಗಲೇ ನೀನು ಕಲಶವನ್ನು ಹೊಡು ಶಿವಪ್ಪಾ! ನನ್ನ ಮಾತನ್ನು ಕೇಳು ಆಮೇಲೆ ಅಂದರೆ ನಿನಗೆ ಬಹಳ ತೊಂದರೆ ಕೊಡ್ತಾರೆ ಎಂದು ಹೇಳಿದರೂ ಕೂಡ, ಗುರುವೇ, ಯಾರು ಏನು ಮಾಡಿದರೂ ನಿಮ್ಮ ಕೃಪೆ ಯೊಂದಿರಲಿ, ಅದನ್ನೆಲ್ಲಾ ಲೀಲಾಮಾತ್ರವಾಗಿ ಗೆಲ್ಲುತ್ತೇನೆ ಸೇವಾಕಾರ್ಯ ವನ್ನು ಪೂರೈಸಿ ಮುಂದೆ ಮಾಡುತ್ತೇನೆ ಎನ್ನಲು, ಹ್ಞೂ, ಹೋ ೯ ಗು ನಿನ್ನಿಷ್ಟ ಎಂದು ಸುಮ್ಮನಾದರು.

ಮರೆಯಾಗಿ ಬಿಡುವರೆಂಬ ವಾರ್ತೆಯನ್ನು ತಿಳಿದು ಹಿರಿಯ ಗುರು ಭಕ್ತಾಗ್ರಗಣ್ಯರೆಲ್ಲಾ ಬಂದು ನಮಸ್ಕರಿಸಿ ದೈನ್ಯೋಕ್ತಿಯಿಂದ ಗುರು ತಂದೆ, ತಾವೀ ವೇಳೆಯಲ್ಲಿ ಮರೆಯಾಗಿ ಬಿಡುವುದು ಯುಕ್ತವಲ್ಲ ಇನ್ನೂ ಸ್ವಾಮಿಯು ಮಾಡಬೇಕಾದ ಕಾರ್ಯಗಳು ಅನಂತವಿವೆ. ನಿರುಪಾಧಿಕ ರಾದ ತಮಗೆ ಹೇಳುವ ಶಕ್ತಿ ನಮಗಿಲ್ಲದಿದ್ದರೂ, ಖಂಡಿತಾ ತಾವಿನ್ನೂ ಕೆಲವು ದಿನವಿದ್ದು ನಮ್ಮನ್ನೆಲ್ಲಾ ಪರಿಪಾಲಿಸಬೇಕೆಂದು ಬೇಡುತ್ತೇವೆ, ಮಹಾಪ್ರಭು ಎಂದು ಕಣ್ಣೀರ್ಗರೆದರು. ಕೃಪಾಮೃತ ಮೂರ್ತಿಯು ಆಯಾಸಾವೃತವಾಗಿದ್ದವರೆದ್ದು ಕುಳಿತು. ಏನ್ರಿ ಇನ್ನೂ ಇರಬೇಕೆ, ಅಂದ್ರೆ ಇರಬಹುದು, ಹೋಗಬೇಕು ಎಂದರೆ ಹೋಗಬಹುದು, ಇದೇನು ಮಹಾ ದೊಡ್ಡ ವಿಷಯವೇ ? ಇನ್ಯಾಕೆ ಸಾಕಲ್ವೆ ಎಂದವನು ನಾನೇ ನಿಶ್ಚಯಿಸಿ ಕೊಂಡಿದ್ದೆ, ಸ್ನಾನಕ್ಕೆ ನೀರು ಕಾಯ್ದಿವೆಯೆ ನೋಡ್ರಿ ಎಂದೆದ್ದು ನಿರಾ ಯಾಸವಾಗಿ ತೆರಳಿದರು. ಅಂದರೆ ತಿಳಿದುಪ್ಪ ಹೆದ್ದುಪ್ಪವಾದಂತೆ ಎಂದಿ ನಂತೆ ಭಕ್ತಾನುಗ್ರಹ ಕಾರ್ಯದಲ್ಲಿ ನಾಲ್ಕೈದು ವರ್ಷಗಳು ಸಂಚರಿಸಿದರು. ಭಕ್ತರು ತಮಗೆ ದಾನವಾಗಿತ್ತ ಸಕಲ ಆಸ್ತಿಪಾಸ್ತಿಗಳನ್ನೆಲ್ಲಾ ಪರಾಧೀನ ನಾಗದಂತೆ ಶ್ರೀ ಮಠದಲ್ಲಿ ನಡೆಯುವ ನಿತ್ಯ ಗದ್ದಿಗೆ ಪೂಜೆ, ದೀಪಾರಾಧನೆ, ಗುರುಲಿಂಗ ಜಂಗಮ ದಾಸೋಹ, ಪ್ರತಿ ವರ್ಷವೂ ನ ಡೆ ಯು ವ ಜ್ಯೇಷ್ಠ, ಕಾರ್ತಿಕಾದಿ ಮಹೋತ್ಸವಗಳೊಡನೆ ಜರಗುವ ದೊಡ್ಡ ದೊಡ್ಡ ಆರಾಧನೆಗಳಿಗೆ ಅವುಗಳಿಂದ ಬರುವ ಉತ್ಪತ್ತಿಯನ್ನು ವಿನಿಯೋಗಿಸುವು

ವಾಗಿ ಮಠವನ್ನು ಭಕ್ತಾಧೀನವೆಂದು ಶ್ರೀಮರ್ಠ ನಿರಂಜನ ಗುರುಮಲ್ಲೇಶ್ವರ ಗದ್ದಿಗೆ ಹೆಸರಿಗೆ ಉಯಿಲು ಬರೆಯಿಸಿಕೊಟ್ಟರು.

ಹೀಗೆ ಲೀಲಾಮಾತ್ರವಾಗಿ ಭಕ್ತ ಮಾಹೇಶ್ವರರ ಸಂದಣಿಯಲ್ಲಿ ಮುಹೂರ್ತ ಮಾಡಿದ್ದಾಗ್ಗೆ ಶ್ರೀ ಮಠಕ್ಕೆ ಗುರುದರ್ಶನಕ್ಕೆಂದು ಬಂದವರ ಯೋಗಕ್ಷೇಮ ಸಮಾಚಾರವನ್ನು ವಿಚಾರಿಸುತ್ತಿರುವಲ್ಲಿ ಕೆಲವರು ಕೈಮುಗಿದು ನಿಂತು, ಹೋದ ಈಶ್ವರ ನಾಮಸಂವತ್ಸರದಲ್ಲಿ ಮಳೆ ಬೆಳೆ ಇಲ್ಲದೆ ದರಿದ್ರಾವಸ್ಥೆಯಲ್ಲಿ ಬಹಳ ಜನ ವನವಾಸಪಟ್ಟರೆಂದು ಹೇಳುತ್ತಾರೆ, ಇನ್ನೈದು ವರ್ಷವಿದೆ ಈಶ್ವರ ಸಂವತ್ಸರ. ಅದರಲ್ಲಿ ಏನಾಗ್ತದೋ ನಮಗೆ ಗೊತ್ತಾಗದು ಗುರುವೆ ಎಂದು ಕೈಮುಗಿದು ಹೇಳಲು, ತ್ರಿಕಾಲಜ್ಞಾನಿಗಳಾದ ಭಿಕ್ಷದ ಮಹಾಪ್ರಭುವು, ಹೌದು ಹಿಂದೆ ಹಾಗಾಯಿತು ಮುಂದಿನ ಈಶ್ವರ ನಾಮ ಸಂವತ್ಸರದಲ್ಲಿ ಹಾಗಾಗುವುದಿಲ್ಲ ಮಳೆ ಬೆಳೆ ಬಹಳ ಉತ್ಕೃಷ್ಟವಾಗಿಯೇ ಫಲಿಸಿ ಒಳ್ಳೆಯ ಸಮೃದ್ಧಿಯಾಗುತ್ತದೆ, ನಮ್ಮ ಮಠದಲ್ಲಿ ಮಾತ್ರ ಉಣ್ಣುವ ಬಟ್ಟಲನ್ನೇ ಕಿತ್ತುಕೊಳ್ಳುತ್ತಾರೆ, ನನ್ನನ್ನೇ ಸುಳ್ಳು ಅಂತಾರೆ ಕಣ್ರಿ ಎಂದು ನಕ್ಕುಬಿಟ್ಟರು. ಇದ್ದವರೆಲ್ಲಾ ಭಯಗ್ರಸ್ತರಾಗಿ ಮೌನವಾಗಿಬಿಟ್ಟರು, ಅದೇನೆಂದು ವಿಶದವಾಗಿ ಮತ್ತೊಮ್ಮೆ ಕೇಳಲು ಯಾರಿಗೂ ಧೈರ್ಯವಿರಲಿಲ್ಲ.

ಮಹಾ ಮಹಾ ಗಣಾರಾಧನೆ ಮುಂತಾದ ಗೊಂದಲದ ಕಾಲದಲ್ಲಿಯೂ ದೊಡ್ಡ ದೊಡ್ಡ ಗಲಾಟೆಗಳಲ್ಲಿಯೂ ಯಾರಿಗೂ ಸುಮ್ಮನಾಗದ ಜನ ಗುರೋತ್ತಮನ ಕೈಯ ಮಂಗಲಗಿರಿ ಚೌಕ ಇಲ್ಲವೇ ಬಾಳೆಪಟ್ಟೆಗೆ ನಿಸ್ತರಂಗ ಸಮುದ್ರವಾಗಿ ಬಿಡುತ್ತಿತ್ತು, ಅಲ್ಲದೆ ಈ ದನಗಳನ್ನೆಲ್ಲಾ ಕಾಯೋದಕ್ಕೆ ನಮ್ಮ ಶಿವಪ್ಪನೇ ಸರಿ, ಆಲ್ವೇನಜ್ಜಾ ಅಂದುಬಿಡುತ್ತಿದ್ದರು.

ಪ್ರತಿವರ್ಷವೂ ದಕ್ಷಿಣ ಕಾಶಿ ಎಂದು ಕಿಕ್ಕಿರಿದು ನೆರೆದ ನಂಜನಗೂಡು ದೊಡ್ಡಜಾತ್ರೆಯ ಪರಿಸೆಗೆಲ್ಲಾ ಅಂಬಲಿ; ಹುರುಳಿ ಬೆಂಗಾಳನು ಬೆಂಗಳೂರು, ಮದರಾಸು, ಬೊಂಬಾಯಿನಿಂದ ಬಂದ ಜನವೆಲ್ಲಾ

ಬಯಸಿ ಬೇಡಿ ತೆಗೆದುಕೊಂಡು ಹೋಗುವಂತೆ ಕೊಟ್ಟು ತಣಿಸುತ್ತಿದ್ದಂಥ ನಮ್ಮ ಪ್ರಸಾದಮೂರ್ತಿ ಶ್ರೀ ಗುರು ಭಿಕ್ಷದವರು. ಆಗ ನೋಡಿ, ಕೇಳಿ ತೃಪ್ತಿಪಟ್ಟ ಅನುಭಾವಿಗಳನೇಕರು ಈಗಲೂ ಅದನ್ನು ನೆನೆಸಿಕೊಂಡು ಕಣ್ಣೀರು ಹಾಕುತ್ತಾರೆ. ಕಲ್ಯಾಣದಲ್ಲಿ ಬಸವಾದಿ ಪ್ರಮಥರೆಲ್ಲಾ ಆಚರಿಸಿದ ನಿತ್ಯನೇಮಗಳ ದಾಸೋಹ ಸುಖದ ಸುಗ್ಗಿಯನ್ನು ಪರುಷ ನೇತ್ರ ಗುರು ಭಿಕ್ಷೇಶ ತಾನು ತನ್ನ ನೋಟಕೂಟ ಬೇಟಗಳಿಂದಲೇ ಭಕ್ತ ಮಂಡಲಿಗೆ ತೋರಿ ಬೀರಿ ಸಾರಿ ಮೆರೆದಿದ್ದಾರೆಂದರೆ ಆಶ್ಚರ್ಯವಿಲ್ಲ. ನಡೆ ನಡೆಗೂ ನುಡಿನುಡಿಗೂ ಮಹಾತ್ಮವಾಡದ ಮಹಿಮೆಗಳೇ ಆಗಿ ಮೆರೆದ ಜಗನ್ನಾಟಕ ಸೂತ್ರಧಾರಿ ಶ್ರೀ ಗುರು ಭಿಕ್ಷೇಶ ನಿರಾಭಾರಿ.



## ಅಧ್ಯಾಯ ೧೦

ಲೋಕಯಾತ್ರೆಯನಿಲ್ಲಿಗೆ ಸಾಕುಮಾಡುವೆನೆಂಬ ಮನೋಹರ್ಷ ದಿಂದ ಗ್ರಾಮಾಂತರಗಳಲ್ಲೆಲ್ಲಾ ಪ್ರವಾಸಮಾಡಿ, ಶಿಷ್ಯಮಂಡಲಿಗೆಲ್ಲಾ ಬುದ್ಧಿ ವಾದವನ್ನು ಹೇಳಿ ಇನ್ನು ಪ್ರವಾಸವನ್ನು ನಿಲ್ಲಿಸಿಬಿಡ್ತೇನೆ ಸಾಕು, ನೀವುಗಳೆಲ್ಲಾ ಶಿವನಲ್ಲಿ ಸೌಖ್ಯವನ್ನು ಹೊಂದಿರೆಂದು ಆಶೀರ್ವದಿಸಿ ಶ್ರೀ ಮಠಕ್ಕೆ ದಯಮಾಡಿಸಿ, ಖಾಹಿಲೆ ನೆಪದಿಂದ ಹಾಸಿಗೆ ಹಿಡಿದು ಮಲಗಿ ದರು. ಯಾವ ಉಪಹತಿಯೂ ಇಲ್ಲದೆ ತ್ರಿಕಾಲ ಲಿಂಗಪೂಜಾ ನಿರತರಾಗಿ, ಬರುವ ಹೋಗುವ ಇಡೀ ಭಕ್ತ ಸಂಕುಲಕ್ಕೆಲ್ಲಾ ದರ್ಶನ ಸ್ಪರ್ಶನಾದಿಗಳ ನ್ನಿತ್ತು, ಬಂದ ಬರವ, ನಿಂದ ನಿಲವರಿತು ಸಂದೇಹ ಸಂಕಲ್ಪಾದಿಗಳನ್ನ ಳಿಸಿ, ಅವರವರ ಮನಸಾಪೇಕ್ಷೆಯನ್ನು ಪರಿಪೂರ್ತಿಗೊಳಿಸಿ ಬೀಳ್ಕೊಡುತ್ತಾ

ಮೂರುನಾಲ್ಕು ಮಾಸಗಳಿದ, ಕಪಟನಾಟಕ ಸೂತ್ರಧಾರಿಯ ಲೀಲಾ ವಿಲಾಸವನ್ನು ಪಮಿಸುವವರಾರು ? ಕೊನೆಗೆ ಕುಳಿತುಕೊಳ್ಳಲು ನಿಜಸುಖ ಸಮಾಧಿಗೆ ಪ್ರಣಮ ಮೊದಲ್ಗೊಂಡು ಇಂದಿಗೆಂಟನೆಯ ದಿನ ಸೋಮ ವಾರಪವರೆಗೆ ಎಲ್ಲವೂ ಆಗಿಹೋಗಬೇಕೆಂದು ಅಪ್ಪಣೆ ಮಾಡಿ, ಎಲ್ಲರಿಗಿಂತಲೂ ಕಡೇಲಿ ಕೊನೇಲಿರಬೇಕೆಂದು ತಾವೇ ಮೊದಲು ಮುರುಕು ಇಟ್ಟಿಗೆ ಕಟ್ಟಿಬಿಟ್ಟಿದ್ದ ಖಾಲಿ ನಿವೇಶನವನ್ನು ತೋರಿ, ಅದನ್ನು ತಾನೆ ಶಿವಪ್ಪ ಹಾಗೇ ಇರಗೊಡ್ತಾನೆಯೇ ? ಸಧ್ಯಕ್ಕೆ ಅಲ್ಲಿ ಮಾಡಿ, ಎಂದರು. ಸಮಾಧಿಮಾಡ್ತಾ ಇರುವವರು ಮಾಡ್ತಾ ಇದ್ದಾರೆ, ಬರ್‍ತಾ ಹೊಗ್ತಾ ಇರುವ ಭಕ್ತರು ಅಗಣಿತವಾಗ್ತಾ ಇದೆ, ಎಷ್ಟು ಹೊತ್ತಿನಲ್ಲೂ ಅಡಿಗೆ ಪಾಡಿಗೆ ಅಡಿಗೆ ನಡೆಯುತ್ತಾ ಇದೆ. ಕುಳಿತುಕೊಳ್ಳುವುದು, ಉಣ್ಣುವುದು, ಏಳುವುದು ಬಿಡುವೇ ಇಲ್ಲ. ಯಾರು ಯಾರಿಗೆ ಏನೇನು ಬೇಕೊ ಕೇಳಿ ಕೊಳ್ಳುತ್ತಿದ್ದಾರೆ. ಭಕ್ತರು ತಂದೊಪ್ಪಿಸುವ ಕಾಣಿಕೆ ಭಕ್ತ್ಯೈಕವಲ್ಲಭನ ಹಾಸಿಗೆಯ ಇಕ್ಕೆಲ್ಲದಲ್ಲಿಯೂ ರಾಶಿರಾಶಿಯಾಯಿತು. ಘಂಟೆಘಂಟೆಗೂ ಹಣ ಎಂದರೆ ನಮ್ಮ ಗುರುಸಿದ್ದಪ್ಪನವರಿಗೆ ಬಹಳ ಆಸೆ ಎಲ್ಲಿ ಕರಿಯೊ ಅಂತ ಕರೆಸಿ ತುಂಬಿಸಿ ಕಳುಹಿಸುತ್ತಿದ್ದರು. ಇಷ್ಟೆಲ್ಲಾ ಹೊರಿಸಿ ಕಳುಹಿಸಿ ದರೂ ಗುರುಸಿದ್ದಪ್ಪನವರಿಗೆ ಭಿಕ್ಷದಪ್ಪ ಬೇಗ ಸಾಯಲಿಲ್ಲವಲ್ಲಾ ಎಂದು ನಮ್ಮಾತ್ಮಿಕೆಗೆ ಬರಲಿಲ್ಲವಲ್ಲಾ ಎಂದು ಒಳಗೊಳಗೆ ಕರುಬುತ್ತಿದ್ದರು. ಜೊತೆಗೆ ಭತ್ತವನ್ನು ಎಷ್ಟು ಸಲ್ಲಾ ಮಿಲ್ ಮಾಡಿಸುವುದಪ್ಪಾ ಎಂದು ಕೇಳಿದರು. ಏನ್ರಿ ಗುರುಸಿದ್ದಪ್ಪನವರೆ! ಭತ್ತ ಮಿಲ್ ಮಾಡಿಸ್ತೀರಿ ? ಇನ್ನೂ ಈ ಭಿಕ್ಷದಯ್ಯ ಕಾಣ್ಲೆ ಇಲ್ವೆ? ನನ್ನ ಭಕ್ತರು ಒಂದೊಂದು ಹಿಡಿ ತಂದ್ಕೊಡ್ತಾರಲ್ಲಾ ಅದನ್ನು ಒಪ್ಪಾಯಿಸಿ ಮಡಗಿಕೊಳ್ಳಿ ಹೋಗ್ರಿ ಸಾಕು ಎಂದು ಗದರುತ್ತಲೂ ಮರುಮಾತಾಡದೆ ಹಿಂದೆ ಸರಿದರು. ಆಗ ಕುರುಬೂರು ಮಲ್ಲೇಸ್ವಾಮಿ ಮುಂತಾದ ಉಳಿದ ಗಣ್ಯಭಕ್ತರು ಬಂದು ನಮಸ್ಕರಿಸಿ ಕೈಮುಗಿದು ನಿಂತು, ಸ್ವಾಮಿಯು ಹೀಗೆಯೇ ಮೌನವಾಗಿ ಹೋಗಿಬಿಡುವುದು ಸರಿಯಾಗುವುದಿಲ್ಲ ಗುರುವೇ, ತಮ್ಮ ನಂತರ ಒಂದು ಗುರುತು ತೋರಿ ಹೋಗುವುದು ಒಳ್ಳೆಯದು ಎಂದು ಬಿನ್ನೈಸಿಕೊಂಡರು.



ಶ್ರೀ ಭೀಷ್ಮದಾರ್ಯಸ್ವಾಮಿಗಳ ಗದ್ದಿಗೆ



ಶ್ರೀ ಗುರುಮಲ್ಲೇಶ್ವರ ಉಚಿತ ವಿದ್ಯಾರ್ಥಿ ನಿಲಯ
ಮೈಸೂರು

ಸ್ವಾಮಿ ನಕ್ಕು, "ಏನು ಮಲ್ಲೇಸ್ವಾಮಿ, ನನ್ನನ್ನು ಯಾರು ತೋರಿದ್ದರು? ಹಾಗೇ, ಚಿನ್ನದ ಕಲಶದಯ್ಯ ನನ್ನೊಡೆಯ ಇದ್ದಾನೆ, ತನ್ನ ಮನೆ ಕೆಲಸಕಾರ್ಯಗಳನ್ನು ಒಂದು ಸೆತ್ತೆ ಕೈಯ್ನಿಂದ ಮಾಡಿಸಿಕೊಳ್ತಾನೆ ಹೋಗ್ರಿ, 'ನಾನು' ಅಂದವನಿಂದ ಏನೂ ಆಗುವುದಿಲ್ಲ," ಎಂದು ನುಡಿದರು. ಆದರೂ ಪ್ರಭುವೆ ಶಿಷ್ಯಮಂಡಲಿಗೆ ಸಂಕೋಚ ನಿಂತುಬಿಡುತ್ತದೆ ಯಾರು? ಏನು? ಅಂತ. ಆದ್ದರಿಂದ ತಾವೇ ಮೊಕ್ತ ಇಂಥಾವರು ಅಂತ ಸೂಚಿಸಿಬಿಟ್ಟರೆ ಎಲ್ಲರಿಗೂ ಸಮಾಧಾನ ಎಂದು ಬೇಡಲು, ನನಗೇನೋ ಯಾರೂ ಕಾಣುವುದಿಲ್ಲಪ್ಪ, ಹಾಗಾದರೆ ನಿಮ್ಮಿಷ್ಟ ಬಂದೊಬ್ಬರನ್ನು ಕರ್‍ಕೊಂಡು ಬನ್ನಿ ಎಂದಾಕ್ಷಣವೇ ಶ್ರೀ ಕೋಂಟದಾರ್ಯ ಮಹಾಸ್ವಾಮಿಯವರನ್ನು ಕರೆದುಕೊಂಡು ಬಂದು ಇದುರಿಗೆ ನಿಲ್ಲಿಸಲು, "ಓಹೋ, ಏನಪ್ಪಾ! ಸರ್ವರನ್ನೂ ನನ್ನನ್ನು ಕಂಡಂತೆ ಕಾಣ್ತೀಯಾ? ಇಲ್ಲದೆ ಹೋದರೆ ಅರಳೀ ಗುಡ್ಡೆಗೆ ಕಿಡಿ ಕೊತ್ಗೊಂಡ್ಹಾಗೆ ಆಗ್ತದೆ ಎಚ್ಚರಿಕೆ, ಹೋಗು," ಎಂದಾಜ್ಞೆಯಿತ್ತರು. ಉಳಿದವರು ಯಾರು ಯಾರಿಗೆ ಏನೇನನ್ನು ಹೇಳಬೇಕೋ ಹೇಳಿಬಿಟ್ಟು ತಾವು ಮಲಗಿದ್ದ ಪಕ್ಕಕ್ಕೆ ಅಂದರೆ ಶ್ರೀ ಗುರುಮಲ್ಲೇಶ್ವರ ಗದ್ದುಗೆಯ ಉತ್ತರ ಪಾರ್ಶ್ವದ ಗೋಡೆ ಮೇಲೆ "ಓಂ ಶ್ರೀ ಗುರುಮಲ್ಲೇಶಾಯ ನಮಃ ಓಂ ಶಿವಾಯ ಶಿವಾಯನಮಃ ಎನ್ನುವುದೇ ಪ್ರಮಾಣ."

"ಎಲೈ, ಭಕ್ತ ಮಾಹೇಶ್ವರರೇ! ಸಕಲ ಜೀವಜಂತುಗಳೂ ಮರಣಾವಸ್ಥೆಯನ್ನೊಳಗೊಂಡಿವೆ. ಆದ್ದರಿಂದ ನೀವುಗಳು ಗುರುವಿನ ಅಪ್ಪಣೆಯಂತೆ ನಿರ್ಮಲವಾಗಿ ಶಿವ ಶಿವಾ ಎಂದು ನಿಮ್ಮ ನಿಮ್ಮ ಜಾಗಗಳಲ್ಲಿ ಉಳಿತಿರಬೇಕು. ಸದಾ ಗುರುಲಿಂಗ ಜಂಗಮರಲ್ಲಿ ಭಯ ಭಕ್ತಿ ವಿಶ್ವಾಸವಿರಬೇಕು. ಟಗರುಗಳಂತೆ ಓಡಾಡುವುದಾದರೆ ಮುಕ್ತಿಯಾಗುವುದಿಲ್ಲ ಇದಕ್ಕೆ ನಿಮ್ಮ ನಿಮ್ಮ ಸತ್ಯಕ್ರಿಯೆಗಳೇ ಸಾಕ್ಷಿ."

"ಶ್ರೀನಿರ್ಮಲ ನಿರಂಜನ ಗುರುಮಲ್ಲೇಶನೇ ಗತಿ."

ಎಂದು ಬರೆಯಿಸಿ ಆನಂದವಾಗಿ ಲಿಂಗಪೂಜೆಯನ್ನು ತೀರಿಸಿ ತಾನೇ ತಾನಾಗಿ ಶ್ರೀಮರ್ಧ ನಿರಂಜನ ಗುರುಮಲ್ಲೇಶ್ವರ ಶ್ರೀಪಾದ ಧ್ಯಾನ ಮಗ್ನರಾಗಿ ಶಾಲೀವಾಹನ ಶಕೆ ೧೮೫೪ ನೇ ಪ್ರಜೋತ್ಪತ್ತಿ ನಾಮ ಸಂವತ್ಸರ ಫಾಲ್ಗುಣ ಮಾಸ ಬಹುಳ ಚತುರ್ದಶಿ ಅಂದರೆ ತಾರೀಖು 4 ನೇ ಏಪ್ರಿಲ್ 1932 ನೇ ಸೋಮವಾರ ಬೆಳಗಿನಜಾವ ನಾಲ್ಕು ಘಂಟೇ ಸಮಯದಲ್ಲಿ ನಿಜೇಷ್ಟಲಿಂಗದಲ್ಲಿ ಬೆರೆದು ಐಕ್ಯಗೊಂಡರು. ಕೂಡಲೇ ಹತ್ತಿರದಲ್ಲಿ ಉರಿಯುತ್ತಿದ್ದ ದೀಪಗಳೆಲ್ಲಾ ಆರಿಹೋಗಿ ಮಠವೆಲ್ಲಾ ಕತ್ತಲೆ ಕವಿಯಿತು. ಸುತ್ತಮುತ್ತಾ ಇದ್ದವರೆಲ್ಲಾ ದೀಪವನ್ನು ಹೊತ್ತಿಸಿ ಬಂದುನೋಡಿದರು. ಜಗಜ್ಯೋತಿಸ್ವರೂಪನು ಅಗಲುವಲ್ಲಿ ನಮಗೆಲ್ಲಾ ಕತ್ತಲ್ಲೆ ಗವಿಸಿದನಲ್ಲಾ ಎಂದು ಗೋಳಿಟ್ಟರು. ಅವರ ಶಿಷ್ಯ ಸಮೂಹವಿದ್ದೆಡೆಗೆಲ್ಲಾ ಸುದ್ದಿ ಪ್ರಸಾರನಾಯಿತು. ಪಂಚಕಳಶ ಪ್ರಾಯವಾದ ಪುಷ್ಪಕ ವಿಮಾನವನ್ನು ರಚಿಸಿ, ಲಿಂಗಮೂರ್ತಿಯನ್ನಿದರಲ್ಲಿ ಕೂಡ್ರಿಸಿ, ಭಜನೆ, ಕೀರ್ತನೆ ಜೈಘೋಷಗಳಾದಿ ಬಿರುದು ಬಿಂಕುಗಳು ಗುಂಪು ಗುಂಪುಗೂಡಿ, ಹಾಡಿ ಪಾಡಿ ಕೊಂಡಾಡತೊಡಗಿದರು. ಕೊಂಬು ತಂಬಟೆ ನಂದಿಧ್ವಜಗಳು ರಂಜಿಸುತ್ತಿದ್ದವು. ಭೃಂಗಿ ನರ್ತಕರನಂತಕಡೆ ನರ್ತಿಸುತ್ತಿದ್ದರು. ನಾನಾವಿಧ ವಾದ್ಯಘೋಷಗಳು ಭೋರ್ಗರೆಯುತ್ತಿದ್ದುವು. ನಾನಾಕಡೆಯಿಂದ ಸಾವಿರ ಸಾವಿರ ಗಟ್ಟಲೆ ಜನಕೆ ಬಂದು ಸೇರುಯುತ್ತಿದ್ದಿತು. ಎಲ್ಲರೂ ಪರಮಾನ್ನ ಭೋಜನ ಸಂತೃಪ್ತರಾಗಿ ಬಹಳ ವಿಜೃಂಭಣೆಯಿಂದ ಊರೆಲ್ಲಾ ಉತ್ಸವಪೂರ್ವಕ ಮೆರವಣಿಗೆ ಮಾಡಿಕೊಂಡು ಬಂದು ಸಿದ್ಧವಾಗಿದ್ದ ಕ್ರಿಯಾಸಮಾಧಿಯಲ್ಲಿ ಮೂರ್ತಿ ಮಾಡಿಸಿ ಅಷ್ಟವಿಧ ಷೋಡಶೋಪಚಾರಾದಿ ವಿಶೇಷ ಪೂಜೆಗಳಿಂದರ್ಚಿಸಿ ಭಸ್ಮದ ಗಟ್ಟಿಗಳಿಂದ ಗದ್ದಿಗೆಯನ್ನು ತುಂಬಿ "ಅಲಕ್ ನಿರಂಜನ ಗುರುಮಲ್ಲೇಶ ಮಹಾ ಪ್ರಭೋ, ಶ್ರೀಮರ್ಧ ನಿರಂಜನ ಭಿಕ್ಷೇಶ ಮಹಾಸ್ವಾಮಿ ಭೋ ಪರಾಕ್" ಎಂದು ಜಯಘೋಷವನ್ನು ಮಾಡಿ ನಮಸ್ಕರಿಸಿದರು.

ಅಂದಿನಿಂದ ಷುರುವಿಂದ ಆರಾಧನೆ ಹನ್ನೊಂದು ದಿನದವರೆವಿಗೂ ಬಿಡುವಿಲ್ಲದೆ ನಡೆದು ಹನ್ನೆರಡನೇ ದಿನದ ಗಣಾರಾಧನೆಗಂತೂ ಬಂದು

ತುಂಬಿದ ಸಾಮಾನಿನ ಸಲಕರಣೆಗಳನ್ನು ಎಲ್ಲೆಲ್ಲಿಗೆ ತುಂಬಿದರೂ ಹಿಡಿಸದು. ಊಟದ ಎಲೆ ಪಿಂಡಿಗಳನ್ನು ಜೋಡಿಸುವುದಕ್ಕೆ ಹನ್ನೆರಡು ಕಂಭದ ದೊಡ್ಡ ತೊಟ್ಟೀಮನೆಯೇ ಸಾಲದೇ ಹೋದಮೇಲೆ ಉಳಿದ ಸಾಮಗ್ರಿಗಳನ್ನು ಎಷ್ಟೆಂದು ಹೇಳುವುದಕ್ಕೆ ಸಾಧ್ಯ. ಮಠದ ಪಶ್ಚಿಮ ದಿಕ್ಕಿಗಿರುವ ಜಮೀನುಗಳಲ್ಲೇ ಸಂಕ್ತಿ ಕುಳಿತಿದ್ದು ಪ್ರಸಾದವನ್ನು ಅಗಣಿತವಾಗಿ ಸೇವಿಸಿ ಮೆರೆಯಿತು. ಹಿಂದೊಮ್ಮೆ ಈ ವಿಭೂತಿ ಪುರುಷರು ತಮ್ಮ ಮೈಗೆಲ್ಲಾ ಎಣ್ಣೆ ಸವರಿಸಿಕೊಳ್ಳುತ್ತಾ ಕುಳಿತಿದ್ದಹಾಗೇಯೇ ಫಕಫಕನೆ ನಗುತ್ತಿದ್ದು ಇನ್ನು ಸ್ವಲ್ಪದಿನದಲ್ಲೇ ಹಿಂದೂ ಆಗಿರಬಾರದು ಇನ್ನು ಮುಂದೂ ಆಗಿರಬಾರದು ಅಂಥಾ ಆರಾಧನೆ ಆಗ್ತದೆ ಕಣಮ್ಮ. ಹದ್ದು ಕಾಗೆಗಳೆಲ್ಲಾ ತಿಂದು ತೃಪ್ತಿ ಪಡುತ್ತವೆ ಎಂದು ಸ್ಫೂರ್ತಿಯಿಂದ ಅಪ್ಪಣೆ ಕೊಡಿಸಿದ್ದರಂತೆ. ಅದೇ ಮೇರೆಗೆ ಈ ಮಹಾ ಗಣಾರಾಧನೆ ನೆರವೇರಿ ಭಕ್ತ ಮಾಹೇಶ್ವರರೆಲ್ಲಾ ಬಹಳ ಸಂತೋಷಗೊಂಡರಲ್ಲದೆ ಸಕಲ ಜೀವ ಜಂತುಗಳೂ ಸಂತುಷ್ಟಿಯಾದುವು.



## ಅಧ್ಯಾಯ ೧೧

ಮುಂದೆ ಶ್ರೀ ಗುರು ತೋಂಟದಾರ್ಯ ಮಹಾಪ್ರಭುಗಳು ಬಹಳ ಕರುಣಾರ್ದ್ರ ಹೃದಯರಾಗಿ ಭಕ್ತಾನುಗ್ರಹವನ್ನು ಕೈಗೊಂಡು, ಭಕ್ತ ಮಂಡಲಿಯ ಅಪೇಕ್ಷೆಯಂತೆ ಪಾದಪೂಜೆ, ಸ್ವೀಕರಿಸುತ್ತ ಉತ್ಸವ ಮೂರ್ತಿಗಳಾಗಿ ಶೋಭಿಸಿ, ದೇಶದಲ್ಲಿ ಶ್ರೀ ಮಠದ ಪ್ರೀತಿ ವಿಶ್ವಾಸಾಭಿಮಾನಗಳನ್ನು ವೃದ್ಧಿಪಡಿಸುತ್ತಾ ಉದಾರತೆಯಿಂದ ದಾಸೋಹಶೀಲರಾಗಿ ಶಿಷ್ಯರ ಸಂಖ್ಯೆಯನ್ನು ಹೆಚ್ಚು ಹೆಚ್ಚಾಗುವಂತೆ ಮಾಡಿ ಮಠದ ಕಾರ್ಯಭಾರವನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗುತ್ತಿದ್ದರು. ಮೊದಲೇ ಪುರಾತನ

ಗದ್ದಿಗೆಗಳನ್ನು ಕಟ್ಟಿಸಬೇಕಾಗಿತ್ತೆಂದು ಸೂಚಿಸಿದ್ದ ಶ್ರೀ ಭಿಕ್ಷದ ಗುರುವಿನ ಪೂಜ್ಯ ಗದ್ದುಗೆ ಮೊವಲ್ಗೊಂಡು, ಪ್ರಪ್ರಥಮ ಘನಲಿಂಗ ಚಕ್ರವರ್ತಿ ಶ್ರೀ ಮುಪ್ಪಿನ ಮಹಾಸ್ವಾಮಿಯವರ ಗದ್ದುಗೆಯನ್ನೊಳಗೊಂಡ ಮೂವತ್ತೂರು ಅಂಕಣ ನೂತನ ಕಲ್ಲುಕಟ್ಟಡ, ಮರಮುಟ್ಟುಗಳಿಂದ ಮಂಗಳೂರು ಹೆಂಚನ್ನು ಹಾಕಿದ ನೂರಾರು ಅಂಕಣವುಳ್ಳ ಭಾರೀ ಕಟ್ಟಡಗಳು, ಅಲ್ಲದ ಭಿಕ್ಷದ ಗುರುಗಳೇ ಯೋಜನೆಹಾಕಿ ಮಣ್ಣು ತೆಗೆಸಿದ್ದ ಕಲ್ಯಾಣಿ (ಕೊಳ) ಯ ಕಟ್ಟಡವೆಂದರೆ ಎಂಥಾ ಇಂಜಿನಿಯರಿಗೂ ಅಸಾಧ್ಯವೆನಿಸುವ ಜಗದ್ವಿಖ್ಯಾತ ಮಹಾಪವಿತ್ರವಾದ ಕೆಲಸ. (ಅಸಮಗ್ರ) ಇವಿಷ್ಟು ಎಷ್ಟೋ ವರ್ಷಗಳೂ ದುಡಿದರೂ ಕೊನೆಗಾಣದವುಗಳನ್ನು ಶ್ರೀ ಶಿವಪ್ಪಸ್ವಾಮಿಗಳು ಕೇವಲ ನಾಲ್ಕೇ ವರ್ಷಗಳಲ್ಲಿ ಪೂರೈಸುತ್ತಾ ಶ್ರೀ ತೋಂಟದಾರ್ಯ ಮಹಾಸ್ವಾಮಿಯವರ ಗುರುತ್ವಕ್ಕೆ ನೆರವಾಗಿ ಮೆರಗು ತರುತ್ತಿದ್ದರು. ಇದಕ್ಕೆ ಮಾತ್ಸರ್ಯದೋರಿತು ಹಲಕೆಲವರಲ್ಲಿ.

ಶ್ರೀಮನ್ನಿರಂಜನ ಗುರುಮಲ್ಲೇಶ್ವರ ಮಹಾಸ್ವಾಮಿಯ ಗದ್ದಿಗೆಯ ಹೆಸರಿನ ಆಸ್ತಿಪಾಸ್ತಿಗಳ ಖಾತೆಯನ್ನೆಲ್ಲಾ ತಮ್ಮ ಹೆಸರಿಗೆ ತಿದ್ದಿಸಿಕೊಳ್ಳುತ್ತಾ ಬಂದಿದ್ದ ಗುರುಸಿದ್ದಪ್ಪಸ್ವಾಮಿಗಳಿಗೆ ಶ್ರೀ ತೋಂಟದಾರ್ಯರ ಮತ್ತು ಶ್ರೀ ಶಿವಪ್ಪಸ್ವಾಮಿಯವರ ಐಕ್ಯಮತ್ಯ ಸರಿದೋರದೆ ದ್ವೇಷಾಸೂಯೆಯುಳ್ಳ ಸ್ವಾರ್ಥಪರರ ಗುಂಪನ್ನು ಕಟ್ಟಿ ಮಠದ ಕಾರ್ಯಕಲಾಪಗಳಿಗೆ ಅಡ್ಡಿಯನ್ನು ಉಂಟುಮಾಡುತ್ತಾ ಬಂದರು. ಖಾತೆ ತಿದ್ದುಪಡಿಯ ವಿಷಯ ಶ್ರೀ ಶಿವಪ್ಪಸ್ವಾಮಿಗಳಿಗೆ ತಿಳಿದು ಶ್ರೀ ತೋಂಟದಾರ್ಯ ಗುರುಗಳವರನ್ನು ಏನಪ್ಪಾ! ಗುರುಸಿದ್ಧಪ್ಪನವರು ಖಾತೆ ತಿದ್ದಿಸಿಕೊಂಡಿರುವುದನ್ನು ಸ್ವಾಮಿ ತಾವು ಕೇಳಬಾರದೆ? ಈ ಹೊತ್ತು ಹೀಗೆ ಮಾಡಿದವರು ನಾಳೆ ಸಂಸ್ಥೆಯನ್ನೇ ನುಂಗಿಬಿಡುತ್ತಾರೆ ಆಮೇಲೆ ಗತಿ? ಎಂದು ಪ್ರಶ್ನಿಸಲು ಗುರುಸಿದ್ಧಪ್ಪನವರ ಹಾಗೂ ಗುರುಸ್ವಾಮಿಯ ದುರಾಗ್ರಹಕ್ಕೆ ಭೀತರಾದ, ಮೃದುಸ್ವಭಾವದ ಶ್ರೀ ತೋಂಟದಾರ್ಯ ಸ್ವಾಮೀಜಿಯವರು ಶಿವಪ್ಪಾ! ಅವರು ದುಷ್ಟರು ಅವರನ್ನು ಕೇಳುವುದಕ್ಕೆ ನನ್ನಿಂದ ಆಗುವುದಿಲ್ಲ, ಏನಾದರೂ ಮಾಡಿಕೊಳ್ಳಲಿ ಹೋಗು ಎಂದರು.

ಆದಕ್ಕೆ ಶ್ರೀ ಶಿವಪ್ಪ ಮಹಾಸ್ವಾಮೀಜಿಯವರು ಹ್ಹಾ! ನೀವೇ ಕೇಳದೆ ಹೋದಮೇಲೆ ಇನ್ನು ಕೇಳುವವರಾರು? ನಮ್ಮ ಗುರುಗಳು ನಿಮಗೆ ಅಧಿಕಾರವನ್ನು ಕೊಟ್ಟಿದ್ದೇಕೆ? ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆಯನ್ನು ಮಾಡಿ ಸಂಸ್ಥೆಗೆ ಚ್ಯುತಿಯುಂಟಾಗದಂತೆ ಅಭಿವೃದ್ಧಿಗೊಳಿಸುವುದಕ್ಕೆ ತಾನೆ? ಈ ಹೊತ್ತು ಇದನ್ನು ಕೇಳೋದಿಕ್ಕೆ ಆಗ್ದೆ ಇದ್ದವರು ನಾಳೆ ಇನ್ನೊಂದನ್ನು ಕೇಳಕೂಡದು ಅಲ್ವೆ? ಎನ್ನಲು, ಸ್ವಾಮೀಜಿಯವರು ನಾನೇನನ್ನೂ ಕೇಳುವುದಿಲ್ಲ ಶಿವಪ್ಪಾ, ಯಾರು ಹೇಗೆ ಬೇಕಾದರೂ ಮಾಡಿಕೊಳ್ಳಲಿ ಎಂದು ಮುಂದಾಲೋಚನೆ ಗೊತ್ತಿಲ್ಲದೆ ಉತ್ತರಿಸಿ ಬಿಟ್ಟರು, ಯಥಾವತ್ ತಮ್ಮ ತಮ್ಮ ಕಾರ್ಯಗಳಿಗೆ ಹೊರಟು ಹೋದರು.

ಶ್ರೀ ಶಿವಪ್ಪಸ್ವಾಮೀಜಿಯವರು ಈ ಕಾರಣಕ್ಕಾಗಿ ಕೆಲವೇ ಜನರಿಗೆ ಅನುಗ್ರಹವಿತ್ತರು. ಇದನ್ನೇ ದೊಡ್ಡ ಸಮಸ್ಯೆಯಾಗಿ ಎತ್ತಿ ಹಿಡಿದು, ಶಿವಪ್ಪ ಉಪದೇಶ ಮಾಡಿದನಲ್ಲಾ ನೋಡಿದಿರಾ? ಇವನು ಮಠದಲ್ಲಿ ಇರಕೂಡದು. ಇವನು ಮಹಾ ಪುಂಡ, ಬಹು ಕೇಡಿ ಎಂದು ಒಂದಕ್ಕೆ ನೂರಾಗಿ ಹೇಳಿ ಶ್ರೀ ತೋಂಟದಾರ್ಯ ಮಹಾಸ್ವಾಮಿಯವರನ್ನು ಒಳಗು ಮಾಡಿಕೊಂಡು ಗುರುಸಿದ್ಧಪ್ಪನವರು ಮಠದ ಕಾರ್ಯಭಾರಗಳನ್ನೆಲ್ಲಾ ಕದಡಿ ಅಲ್ಲಸಲ್ಲದ ದುರ್ವ್ಯಾಜ್ಯಗಳನ್ನು ಹೂಡಿ ಜಂಗಮ ತಿಂತಿಣಿ ಯನ್ನು ಹೊಡೆದೋಡಿಸಿ, ಭಕ್ತವೃಂದವನ್ನೆಲ್ಲಾ ನುಚ್ಚುನೂರಾಗಿ ಮಾಡಿ ದರು. ದೇವನೂರು ಭಕ್ತರನ್ನು ರಿಮ್ಯಾಂಡಿನಲ್ಲಿರಿಸಿದರು. ಮಠದಿಂದ ಧನ ಧಾನ್ಯಾದಿ ಚರಸ್ವತ್ತುಗಳನ್ನೆಲ್ಲಾ ಲಂಚ ಕೊಟ್ಟು ತತ್ವಜ್ಞಾನವಿಲ್ಲದ ಭಕ್ತಾದಿಗಳನ್ನು ತಮ್ಮಂತೆ ಮಾಡಿಕೊಂಡು ತತ್ವವೇತ್ತರಿಗೆ ಬಹಳ ಕಷ್ಟ ನಷ್ಟವನ್ನುಂಟು ಮಾಡಿದರು. ಭಕ್ತಾಧೀನ ಮಠವೆಂದು ಬರೆಯಿಸಿಟ್ಟಿದ್ದ ಭಕ್ತೋದ್ಧಾರಕ ಶ್ರೀ ಗುರುಭಿಕ್ಷದ ಗುರುಗಳ ಉಯಿಲನ್ನು ಮರೆಮಾಚಿ ಈ ಕೆಳಕಂಡಂತೆ ಕೋರ್ಟಿಗೆ ಸ್ಟೇಟ್‌ಮೆಂಟನ್ನು ಕೊಟ್ಟಿರುತ್ತಾರೆ.

ಮಠವೆನ್ನುವುದು ತಪ್ಪು, ಸಮಾಧಿ ಅಥವಾ ಗದ್ದಿಗೆ. ಶ್ರೀ ಗುರು ಮಲ್ಲೇಶ್ವರ ಮಹಾಸ್ವಾಮಿಯವರು ವಿವಾಹಿತರು. ಇವರ ಮಗಳು

ಆಲಮ್ಮ (ಬಾಳಪ್ಪಶೆಟ್ರ ಮಗಳು) ಆಲಮ್ಮನ ಮಕ್ಕಳು ಚೆನ್ನಬಸಪ್ಪ ಸ್ವಾಮಿಗಳು. ಇವರ ಮಗ ಬಸವಣ್ಣ, ಬಸವಣ್ಣನವರ ಮಕ್ಕಳು ಗುರುಸ್ವಾಮಿ, ಬಸವರಾಜು. ಆದ್ದರಿಂದ ಈ ಗದ್ದಿಗೆಗಾಗಿ ಆರ್ಜಿಸಿದ ಚರಸ್ಥಿರ ಸ್ವತ್ತುಗಳೆಲ್ಲವೂ ಕೂಡ, ಶ್ರೀ ಗುರುಮಲ್ಲೇಶ ಮಹಾಸ್ವಾಮಿಯವರ ಮೊಮ್ಮಕ್ಕಳ ಮೊಮ್ಮಕ್ಕಳಿಗೆ ಸೇರಿದವುಗಳು. ಗತಿಸಿದ ಭಿಕ್ಷದಸ್ವಾಮಿಗಳು, ಸ್ವಾಮಿಗಳಲ್ಲ, ಆಳು ಮಾತ್ರವಾಗಿ ಕೆಲಸ ಮಾಡಿಕೊಂಡಿದ್ದವರು. ಇವರು ಯಾವ ಮಠವನ್ನು ಕಟ್ಟಿಲ್ಲ. ಯಾವ ಆಸ್ತಿಯನ್ನೂ ಸಂಪಾದಿಸಿದವರಲ್ಲ ಎಂಬುದಾಗಿ ಕೇಸಿನ ಮೇಲೆ ಕೇಸು ಕೊಟ್ಟು ಕೊಟ್ಟು ಬಿಡದೆ ಹನ್ನೆರಡು ವರುಷ ಇಡೀ ಸಮಾಜವನ್ನೇ ತಲ್ಲಣಿಸಿಬಿಟ್ಟರು. ಆದರೆ ಮಹಾ ವಿಭೂತಿಗಳು ತಳಸೋಸಿ ಹಾಕಿರುವ ಸುಭದ್ರವಾದ ತಳಹದಿಯ ಮೇಲೆ ಕಟ್ಟಿರುವ ಶಾಶ್ವತ ಮಹಾಸಂಸ್ಥೆ, ಇದರಲ್ಲಿ ಪರುಷ ಮುಷ್ಟಿಯಿಂದ ನೆಟ್ಟಿರುವ ನಿಶ್ಚಲ ನಿಜತತ್ವ ನಿಷ್ಠೆ ಇವುಗಳನ್ನು ಶಿಥಿಲಗೊಳಿಸಲು ಯಾವ ಅಧಿಕಾರ, ಯಾವ ಹಣ, ಯಾವ ಜನೇತ್ಯಾದಿ ದುರದ್ದೇಶಗಳೂ ಸಮರ್ಥವಾಗದೆ ವಿಫಲಗೊಳ್ಳುವಂತೆ ಈ ಕೆಳಕಂಡಂತೆ ಕೋರ್ಟು ತೀರ್ಪಿತ್ತಿತು.

ಇದು ಭಕ್ತಾಧೀನವಾದ ಮಹಾ ದಾಸೋಹ ಮಠ. ಮಹಾ ಮಠದ ಒಳಗೆ ಪವಿತ್ರ ಗದ್ದಿಗೆ. ಗದ್ದಿಗೆಯಾಗಿರುವ ಶ್ರೀ ಗುರುಮಲ್ಲೇಶ ಮಹಾಸ್ವಾಮಿಯವರು ಅವಿವಾಹಿತರು. ಇವರ ಕರಕಮಲ ಸಂಜಾತರಾದ ಶ್ರೀ ಗುರು ಭಿಕ್ಷದ ಮಹಾಸ್ವಾಮೀಜಿಯವರು ಮಹಾಮಠ ಮತ್ತು ಇವರ ಶಾಖಾ ಮಠಗಳನ್ನನೇಕ ಕಟ್ಟಿ ಆಸ್ತಿಪಾಸ್ತಿಗಳನ್ನು ಭಕ್ತರಿಂದ ದಾನವಾಗಿ ಪಡೆದುಕೊಂಡು ಪೂಜ್ಯ ಗದ್ದಿಗೆಯ ಹೆಸರಿಗೆ ಉಯಿಲು ಬರೆಯಿಸಿಟ್ಟರುತ್ತಾರೆ. ಇವರ ನಂತರ ಮಠದ ಸರ್ವಾಧಿಕಾರಿಗಳಾಗಿ ಬಂದವರು ಯಾವ ವಿಧದಿಂದಲೂ ಆಸ್ತಿಪಾಸ್ತಿಗಳನ್ನು ಪರಾಧೀನ ಮಾಡದೆ ಬಂದ ಉತ್ಪತ್ತಿಯಿಂದ ಮಠದಲ್ಲಿಯ ನಿತ್ಯ ದೀಪಾರಾಧನೆ, ಗದ್ದಿಗೆ ಪೂಜೆ, ಗುರುಲಿಂಗ ಜಂಗಮದಾಸೋಹ ಮುಂತಾದವುಗಳನ್ನು ನಡೆಸಿಕೊಂಡು ಹೋಗುವುದು. ಪಟೇಲ್ ಶಂಕರಮ್ಮನವರು ಗದ್ದಿಗೆ ಪೂಜೆಗಾಗಿ ಶ್ರೀ ಚನ್ನಬಸಪ್ಪಸ್ವಾಮಿ

ಗಳಿಗೆ ಬರೆದ ಲಿಪಿಯಲ್ಲಿನ ಶಾಸನದಂತೆ ಇವರ ಮೊಮ್ಮಕ್ಕಳಾದ ಗುರುಸ್ವಾಮಿ ಮತ್ತು ಬಸವರಾಜು ಇವರ ಗದ್ದಿಗೆ ಪೂಜೆ, ಆರು ಅಂಕಣ ಮನೆಯ ವಾಸವಲ್ಲದೆ ಮತ್ತಾವುದರ ಸಂಬಂಧವೂ ಇಲ್ಲ. ಶ್ರೀ ಭಿಕ್ಷದ ಗುರುಗಳವರ ಉಯಿಲು ಪ್ರಕಾರ ಶ್ರೀ ತೋಂಟದಾರ್ಯರೇ ಜೀವಾವಧಿ ಸರ್ವಾಧಿಕಾರಿಗಳೆಂಬುದಾಗಿದೆ.

ಈ ತೀರ್ಪಿಗೂ ಸುಮ್ಮನಿರದ ಗುರುಸಿದ್ದಪ್ಪಸ್ವಾಮಿಗಳು ಹೈಕೋರ್ಟಿಗೆ ಅಪೀಲಿತ್ತರು. ಅಲ್ಲಿಯ ವಿಚಾರಣೆಯಲ್ಲಿ ಮಠಕ್ಕೆ ಸರ್ವಾಧಿಕಾರವನ್ನು ತೆಗೆದು ಇಬ್ಬರು ಮ್ಯಾನೇಜರುಗಳನ್ನು ಖಾಯಂ ಮಾಡಿಬಿಟ್ಟರು. ಉಳಿದುದೆಲ್ಲವನ್ನೂ ಮೊದಲಿದ್ದಂತೆಯೇ ತೀರ್ಮಾನಿಸಿದರು. ಮೊದಲನೇ ಮ್ಯಾನೇಜರಾಗಿ ಶ್ರೀ ಡಿ. ಎಂ. ಸಿದ್ದಯ್ಯ, ಎಂ. ಎ. ಎರಡನೇ ಮ್ಯಾನೇಜರಾಗಿ ಶ್ರೀ ತೋಂಟದಾರ್ಯ ಮಹಾಸ್ವಾಮಿಗಳು-ಹೀಗೆ ಕೋರ್ಟು ನಿಯಮಿಸಿದಾಗ ಗುರುಸಿದ್ದಪ್ಪನವರು-ಸಿದ್ದಪ್ಪನವರಾದರು. ಆಮೇಲೆ ಶ್ರೀ ಗುರುಶಿವೇಶ ಮಹಾಪ್ರಭುಗಳು ಮೊದಲನೇ ಮ್ಯಾನೇಜರನ್ನು ಕರೆಸಿ, ಹುಷಾರ್ ! ನಮ್ಮ ತೋಂಟದಾರ್ಯ ಮಹಾಸ್ವಾಮಿಯವರನ್ನೇ ನೀನು ಮುಂದಿಟ್ಟುಕೊಂಡು ಹೋಗಬೇಕು, ಎಚ್ಚರಿಕೆಯಿಂದಿರು ಎಂದು ಹೇಳಿ, ತಮಗುಂಟಾದ ಪರ್ವತೋಪಾದಿಯ ತೊಂದರೆಗಳನ್ನೆಲ್ಲಾ ತೃಣದೋಪಾದಿಯಲ್ಲಿ ಕಳೆದು ಸಮಾಜದ ಕುಂದುಕೊರತೆಗಳನ್ನೆಲ್ಲಾ ಹೋಗಲಾಡಿಸಿ ಮಹಾಸಂಸ್ಥೆಯ ಗುರುತ್ವಕ್ಕೆ ಕೊರತೆ ಬಾರದ ಹಾಗೆ ನೋಡಿಕೊಳ್ಳುತ್ತಾ, ತಮಗೆ, " ಶಿವಪ್ಪಾ, ಕೊಳವನ್ನು ನೋಡಿಕೋ " ಎಂದು ಬಾರಿ ಬಾರಿಗೂ ಉಸುರುತ್ತಿದ್ದ ಅಸಮಪ್ರಭು ಭಿಕ್ಷೇಶನ ವಾಕ್ಯನ್ನು ಸ್ಮರಿಸಿಕೊಂಡು ಅಸಮಗ್ರವಾಗಿರುವ ಕಲ್ಯಾಣಿಯ ಕೆಲಸಕ್ಕೆ ಪ್ರಾರಂಭಿಸುತ್ತಿರಲು, ಪೂಜಾರಿಗಳಾದ ಗುರುಸ್ವಾಮಿ, ಬಸವರಾಜು ವಿಘ್ನವನ್ನುಂಟುಮಾಡಿದರು. ಶಿವಪ್ಪ ಶ್ರೀಗಳವರು ಶಾಂತಿಯಿಂದ ಅವರಿಗೆ ಹೇಳುವಷ್ಟು ಹೇಳಿ ಕೊನೆಗೆ ಸಾಧ್ಯವಾಗದೆ

ಕಲ್ಯಾಣಿಯ ಕೊನೆಯ ರೂಹುಗಾಣಿಸಿ ಕೆಲಸವನ್ನು ಕೈಬಿಟ್ಟರು. ಇಲ್ಲಿಗೆ ಸುರತರುವನ್ನೇ ಮುರಿದುಬಿಡುತ್ತೇನೆಂದು ಹಬ್ಬಿಕೊಬ್ಬಿದ್ದ ವಿಷ ಮುಳ್ಳಿನ ಬಳ್ಳಿಯ ಸಮೂಲವನ್ನೇ ನಿರ್ಮೂಲವಾಗಿ ಕಿತ್ತುಬಿಟ್ಟಂತೆ ಆಯಿತು. ಮರೀಚಿಕಾಜಲದಂತೆ ಪ್ರಭು, ಎಂದು ಮಾಯೆ ನಿರಾಶೆಯಾಗಿ ಕೈಬಿಟ್ಟಂತೆ ಆಯಿತು. ಪ್ರಜ್ವಲಿಸುವ ದೀಪದುರಿಯ ಪ್ರಭಾವಕ್ಕೆ ಬೆವರಿ ಕತ್ತಲೆಯು ತಲೆ ಎತ್ತಲವಕಾಶವಿಲ್ಲದಂತೆ ರಸಾತಲದಲ್ಲಿ ಅವಿತುಕೊಳ್ಳು ವಂತಾಯಿತು.

ಶ್ರೀ ಗುರು ಶಿವೇಶ ಮಹಾಸ್ವಾಮಿಯು ಗುಪ್ತದಲ್ಲಿದ್ದ ಮಲೆಯೂರು ಬೆಟ್ಟದ ಕಲ್ಲರೆಗಳನ್ನೊಡೆಯಿಸಿ, ಗೇಯಿಸಿ ದೊಡ್ಡ ದೊಡ್ಡ ಬೆಳ್ಳಿಯ ಗಟ್ಟಿಗಳಂತೆ ಮಾಡಿಸಿ ಶ್ರೀ ಮಠದ ನೆಲ, ಗೋಡೆ, ಕಂಬ, ಸಿಂಬಿ, ತೊಲೆ, ಮೇಲ್ಛಾವಣಿಗೆಲ್ಲಾ ಅವೇಯಾಗಿ ತುಂಬಿ ಪ್ರಳಯಕಾಲಕ್ಕೂ ಅಚ್ಚಳಿಯ ದಂಥಾ ಕೆಲಸ ಮಾಡಿಸುವವರಾಗಿದ್ದರು. ಆ ಪುಣ್ಯ ಲೋಕಕ್ಕಿಲ್ಲ ವಾಯಿತು. ಮಹನೀಯರು ಸೇವೆ ಮಾಡುವುದಿಲ್ಲದೆ ಹೋದರೆ ಅದೇತಕ್ಕೆ ತಾನೇ ಈ ಭೂಮಿಯ ಮೇಲೆ ಇರುವುದೆಂದು ವಿರೋಧಿನಾಮ ಸಂವತ್ಸರ ಮಾರ್ಗಶಿರ ಮಾಸ ಶುದ್ಧ ಚತುರ್ದಶಿ ದಿನಾಂಕ 4–12–1949 ನೇ ಭಾನುವಾರ ಸೂರ್ಯಾಸ್ತಮಯದ ಮೇಲೆ ಮುಖದೊಳೆದು ಭಸ್ಮಧಾರಿ ಗಳಾಗಿ ಮಹಾಮಂತ್ರಯುತರಾಗಿ, ಊರ್ಧ್ವದೇಹಿಗಳಾಗಿ ಕುಳಿತು ಸಮೀಪದಲ್ಲಿದ್ದವರೊಡನೆ ಗುರುಗಳ ಗದ್ದಿಗೆ ಪಕ್ಕಕ್ಕೆಂದು ಸೂಚಿಸಿ ಕರ ಧೃತಲಿಂಗ ಪ್ರಕಾಶದಲ್ಲಿ ಬೆರೆದು ಐಕ್ಯಗೊಂಡರು. ಲಿಂಗದೇಹವನ್ನು ಶ್ರೀ ಮಠದಲ್ಲಿ ಪೂಜ್ಯಗದ್ದಿಗೆ ಮಾಡಲಾಯಿತು. ಗಣಾರಾಧನೆ ಬಲು ಗಂಭೀರ ವಾಗಿ ನಡೆದು ಯಶಸ್ವಿಗೊಂಡಿತು.

ಇತ್ತ ವರಗುರುವರೇಣ್ಯ ಶ್ರೀ ತೋಂಟದಾರ್ಯ ಮಹಾಸ್ವಾಮಿ ಗಳವರು ಬಹಳ ವೈಭವದಿಂದ, ಪಾದಪೂಜೋತ್ಸಾಹಗಳಿಂದ, ಭಕ್ತ ಮಂಡಲಿಯನ್ನು ಹೆಚ್ಚಿಸಿ ದಾಸೋಹದೇಳ್ಗೆಯನ್ನು ಮೆರೆದರು. ಅವರು ಅತ್ಯಭೂತಪೂರ್ವವಾಗಿ ಶ್ರೀ ಗುರುಮಲ್ಲೇಶರ ಸುವರ್ಣ ಮಹೋತ್ಸವ



ಶ್ರೀ ಶಿವಪ್ಪನವರ ಗದ್ದಿಗೆ



ಶ್ರೀ ತೋಂಟದಾರ್ಯಸ್ವಾಮಿಗಳ ಗದ್ದಿಗೆ

ಮತ್ತು ಅರವತ್ತು ಮೂವರು ಪುರಾತನರ ಪೂಜೆಯನ್ನು ವೈಶಿಷ್ಟ್ಯಪೂರ್ಣ ವಾಗಿ ಮಾಡಿ ಭಕ್ತಮಂಡಲಿಯನ್ನು ಸಂತೃಪ್ತಗೊಳಿಸಿದರು. ಅಲ್ಲದೆ ದೇವನೂರಿನಲ್ಲಿ ಒಂದು ಸಾರ್ವಜನಿಕ ಉಚಿತ ವಿದ್ಯಾರ್ಥಿನಿಲಯವನ್ನು ಆರಂಭಿಸಿ ವಿದ್ಯಾದಾನಕ್ಕೂ ಪ್ರೋತ್ಸಾಹವಿತ್ತರು. ಹೀಗೆ ಭಕ್ತರ ನಿಜ ಮನೋವಾಸದಲ್ಲಿ ಮೆರೆದ ಮಹಾಸ್ವಾಮಿಯು ಅನಿವಾರ್ಯ ವಾದ ಬೇನೆ ಯಿಂದಾಗಿ ಹೇವಿಳಂಬಿನಾಮ ಸಂವತ್ಸರ, ಮಾಘಮಾಸ ಬಹುಳ ಭಾನುವಾರ ದಿನಾಂಕ 17 ಫೆಬ್ರವರಿ 1957 ರಂದು ಲಿಂಗೈಕ್ಯರಾದರು. ಮಹಾಮಠದಲ್ಲೇ ಮಹಾನುಭಾವರ ಶ್ರೀ ಗದ್ದಿಗೆ ನಿರ್ಮಾಣವಾಯಿತು. ಗಣಾರಾಧನಾ ಮಹೋತ್ಸವ ಬಹಳ ವಿಜೃಂಭಣೆಯಿಂದ ನೆರವೇರಿತು.

ಇನ್ನಿವರ ಸ್ಥಾನಕ್ಕೆಂದು ಒಬ್ಬ ಮೂರ್ತಿಯನ್ನು ಚುನಾಯಿಸ ಬೇಕೆಂದು ಭಕ್ತಮಂಡಲಿ ಎಲ್ಲಾ ಕೂಡಿ ಶ್ರೀ ಶಿವಬಸವಮಹಾಸ್ವಾಮಿಗಳ ವರನ್ನು ಆರಿಸಲಾಯಿತು. ಶ್ರೀ ಶಿವಬಸವಸ್ವಾಮಿಗಳು ಶ್ರೀ ಮಠದಲ್ಲಿ ಇಪ್ಪತ್ತು ವರ್ಷಗಳಿಗೂ ಹೆಚ್ಚುಕಾಲ ಅಪರಿಮಿತವಾಗಿ ಸೇವೆ ಸಲ್ಲಿಸಿದ್ದರು. ಅಡುಗೆ ಮನೆಯ ಅಡುಗೆಯ ಕಾಯಕದಲ್ಲಿ ನಿರತರಾಗಿದ್ದ ಮಹಾಸ್ವಾಮಿ ಗಳು ಅತಿ ವಿದ್ಯಾವಂತರಲ್ಲದಿದ್ದರೂ ಪಾಂಡಿತ್ಯ ಶಕ್ತಿ ಅವರಲ್ಲಿತ್ತು. ಹಳೇ ಗ್ರಂಥಗಳನ್ನು ಅವಲೋಕಿಸಿ ತರ್ಕಮಾಡಿ, ವಿಮರ್ಶೆಮಾಡುವ ಶಕ್ತಿ ಯಿತ್ತು. ಇವರ ಈ ಶಕ್ತಿಗೆ ಪ್ರತಿಫಲವಾಗಿ ಇವರು ಚನ್ನಪ್ಪಕವಿ ವಿರಚಿತ ವಾದ "ಶ್ರೀ ಶರಣಲೀಲಾಮೃತ" ಎಂಬ ಕೃತಿಯನ್ನು ಸಂಶೋಧಿಸಿ, ಸಂಪಾದಿಸಿ ಹೊಸದಾಗಿ ಮುದ್ರಿಸಿ ವೀರಶೈವ ತತ್ವದ ತಿಳಿಯನ್ನು, ಬಸ ವಾದಿ ಪ್ರಮಥರ ಮಾರ್ಗವನ್ನು ಎಲ್ಲಾ ಜನರೂ ಓದಿ, ತಿಳಿದು, ಆಚರಿಸು ವಂತಹ ಕಾರ್ಯಕ್ಕೆ ನೆರವಾದರು. ಅವರ ಸೇವೆಗೆ ತಕ್ಕ ಪ್ರತಿಫಲ ಶ್ರೀ ಮಠದ ಸೂತ್ರ ವಹಿಸಿಕೊಂಡದ್ದು.

ಆದರೆ ಗುರುಸ್ವಾಮಿ, ಬಸವರಾಜು ಅವರು ಇವರನ್ನು ವಿರೋಧಿಸಿ, ಸ್ವಾರ್ಥಪರರಾದ ಕೆಲವೇ ಜನ ಭಕ್ತರ ಸಮೂಹ, ವೇಶಭೂಷಣ ವಿಷಯಾಸಕ್ತ ಮಾಹೇಶ್ವರರ ಸಂದಣಿಗೂಡಿ ಯಥೇಚ್ಛ ಧನವ್ಯಯಮಾಡಿ

ಅಲ್ಲಸಲ್ಲದ ವ್ಯಾಜ್ಯವನ್ನು ಹೂಡಿ ಸಮಾಜಕ್ಕೆ ತೊಂದರೆಯನ್ನುಂಟು ಮಾಡಿದರು. ಶ್ರೀ ಮಠಕ್ಕೆ ಯಾವಾಗಲೂ ಗುರುಗಳೇ ಇಲ್ಲವೆಂಬುದನ್ನು ಸಮರ್ಥಿಸಿ, ಅದಕ್ಕೇ ಬೇರೆ "ಎಮ್ಮೆಗ್ಬಾಕೋ ಸೂಡನ್ನು ಎತ್ತಿಗೆ ಹಾಕಿದ್ಬಾಗೆ" ಎಂ. ಎಲ್. ಎ. ಗಳ ಕಮಿಟಿ ಮಾಡಿಸಿ ಏನೇನೋ ಮಾಡಿಸಿದರು. ಆದರೆ ಇದು ಯಾವುದೂ ಫಲಕಾರಿಯಾಗಲೇ ಇಲ್ಲ. ಶ್ರೀ ಮಠದ ಕರ್ತವ್ಯಕ್ಕೇನೂ ಲೋಪವೂ ಬರಲೇ ಇಲ್ಲ, ಗುರುತ್ವವನ್ನು ಯಾರೂ ನಶಿಸಲು ಸಾಧ್ಯವಾಗಲಿಲ್ಲ. ಭಕ್ತರೆಲ್ಲಾ ಅವರ ಮೇಲೆ ಸಿಟ್ಟಿಗೆದ್ದರು. ಗುರುಗಳು ಇಲ್ಲದೆ ಮಠವೆಲ್ಲಿ ಬಂತು ಎಂದು ವಾದಿಸಿದರು. ಇದರಿಂದ ತಮಗೆ ತಾವೇ ಸ್ಥಾನಮಾನಗಳನ್ನು ಕಳೆದುಕೊಂಡು ಪೂಜಾರಿಗಳು ಹೊರಟುಹೋದರು. ಇಲ್ಲಿಗೆ ಮೊದಲೇ ಬೇರನ್ನೇ ಕಿತ್ತು ಬಿಸುಟಿರುವುದರಿಂದ ಹಚ್ಚಿದ್ದ ನಂಜು ಮುಳ್ಳಿನ ಬಳ್ಳಿ ಎಲ್ಲಾ ಹಾಗೆಯೇ ಒಣಗಿ ನುಸಿದು ನುಗ್ಗಾಗಿ ತನ್ನಷ್ಟಕ್ಕೆ ತಾನೇ ಕಳಚಿಕೊಂಡು ನಶಿಸಿ ಹೋಗಲಾಗಿದೆ. ನಿರಂಜನ ವೃಕ್ಷ ತಾನೇ ಅಲಕ್ಕಾಗಿ ಉಳಿದಂತಾಗಿದೆ. ಹತಾಶಳಾಗಿ ಮಾಯೆ ತೊಲಗಲು, ಭಕ್ತಿ ಸತೀಶ ಪ್ರಭು ಮುಕ್ತಿ ಮಾಲಿಗನಾಗಿ ಮೆರೆದಂತಾಗಿದೆ. ಸತ್ ಚಿತ್ ಆನಂದ ನಿತ್ಯಪರಿಪೂರ್ಣ ಪರಂಜ್ಯೋತಿ ಸ್ವರೂಪ ಎತ್ತೆತ್ತಲೂ ತಾನೇತಾನಾಗಿ ಪ್ರಜ್ವಲಿಸುವಂತಾಗಿದೆ.

ಹೀಗೆ ಒಂದೆರಡು ವರ್ಷಗಳು ಕಳೆದ ಮೇಲೆ ಕಾರಣಾಂತರಗಳಿಂದ ಶ್ರೀ ಶ್ರೀ ಶಿವಬಸವಸ್ವಾಮಿಗಳವರು ಅಧಿಕಾರವನ್ನು ಬಿಟ್ಟು ಹೊರಟು ಹೋದರು.

"ಈ ಗುರುಮಲ್ಲಯ್ಯ ಮರೆಯಾಗಿ ಕೂತ್ಗೊಂಡಾಗ ನೋಡೋ, ಹಾಸಿದ ಬಟ್ಟೆಲೆತ್ತದೆ ಉಣ್ತಾರೆ" ಎಂದ ವಾಕ್ಪರುಷದ ಬಲುಮೆಯಿಂದ "ನಾನು ಅಂದವನಿಗೆ ಏನೂ ಆಗುವುದಿಲ್ಲ, ಚಿನ್ನದ ಕಲಶದಯ್ಯನ ಮನೆ ಕೆಲಸವನ್ನು ಒಂದು ಸೆತ್ತೆ ಮಾಡಿಕೊಂಡು ಹೋಗ್ತದೆ ಹೋಗಜ್ಜಾ" ಎಂದ ಕೃಪಾಮಯನ ಒಲುಮೆಯಿಂದಲೂ—



ಶ್ರೀ ಭಿಕ್ಷದ ಸ್ವಾಮಿಗಳ ಕರಸಂಜಾತರಾದ

ಶ್ರೀ ಶಿವಬಸಪ್ಪಸ್ವಾಮಿಗಳು

ಕಾರಣ ಕರ್ತಗುರು। ಶಾಂತಮಲ್ಲೇಶನ।
ಕರ ಸಂಜನಿತ ಭಿಕ್ಷೇಶ್ವರನ।
ಕರ ಕಮಲೋದ್ಭವ। ಗುರುಸುಶಿವೇಶನ।
ಚರಣ ಸಂಭವ ಶಿಶು ಬಸವ॥

ಎಂಬುದಾಗಿ ಶ್ರೀಮದ್ ನಿರಂಜನ ಗುರುಮಲ್ಲೇಶ್ವರ ಮಹಾಸಂಸ್ಥಾನ ದಾಸೋಹಮಠದ ಶಾಖಾ ಭೋಗೈಯ್ಯನಹುಂಡಿ ದಾಸೋಹ ಭಿಕ್ಷಾ ಮಠದಲ್ಲಿ ಕಂಥೇ ಭಿಕ್ಷದ ಕಾಯಕಾಚರಣೆ ಇಂದಿರ್ದು, 1959 ನೇ ಇಸ್ವಿ ಯಿಂದ ಮಹಾ ಮಠದಲ್ಲಿ ಹೆಚ್ಚು ಕುಂದಿಲ್ಲದೆ ಭಕ್ತಮಂಡಲಿಯ ಅಪೇಕ್ಷೆ ಮೇರೆ ಸೇವಾನಿರತನಾಗಿರುವ ಸೆತ್ತೆಯಂತಾ ಶ್ರೀ ಬಸವಣ್ಣಸ್ವಾಮಿಯಿಂದ ಮಹಾಸಂಸ್ಥೆಯ ಕರ್ತವ್ಯ ನೆರವೇರಿಸಿಕೊಳ್ಳುತ್ತಿರುವುದೇ ಶ್ರೀ ಗುರು ಮಲ್ಲೇಶನ ಮಹಾತ್ಮೆ.





" ಶ್ರೀ ಶ್ರೀ ಶ್ರೀ "

## ಅಧ್ಯಾಯ ೧೨

" ಕೃಷಿ ಕೃತ್ಯ ಕಾಯಕವಾದೊಡೇನು ?
ತನುಮನ ಬಳಲಿಸಿ ತಂಪು ದಾಸೋಹವ ಮಾಡುವ
ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ !
ಅದೆಂತೆನೆ, ಆತನ ತನು ಶುದ್ಧ ಆತನ ಮನ ಶುದ್ಧ
ಆತನ ನಡೆ ಶುದ್ಧ, ನುಡಿ ಎಲ್ಲ ಪಾವನವು !
ಆತಂಗೆ ಉಪದೇಶ ಮಾಡಿದಾತನೇ ಪರಮ ಸದ್ಗುರು
ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊಕ್ಕು
ಲಿಂಗಾರ್ಚನೆಯ ಮಾಡುವ ಜಂಗಮನೇ ಜಗತ್ಪಾವನ !
ಇಂತಪ್ಪವರ ನಾನು ನೆರೆನಂಬಿ
ನಮೋ ನಮೋ ಎಂಬೆನಯ್ಯಾ, ಕೂಡಲಸಂಗಮದೇವಾ ! "

ಹೀಗೆ ಅಸಂಖ್ಯಾತ ಭಕ್ತ ವೃಂದದಿಂದ " ನಮೋ ನಮೋ " ಎನಿಸಿಕೊಳ್ಳುತ್ತಿರುವ ಜಗತ್ಪಾವನಮೂರ್ತಿ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ತೋಂಟದಾರ್ಯ ಮಹಾಸ್ವಾಮಿಗಳವರು, ದೇಹವನ್ನು ದಂಡಿಸಿ, ಕಾಯಕಮಾಡಿ ದಾಸೋಹ ಮಾಡುವ ಸದಾಚಾರ ಸಂಪನ್ನನಾದವನು ಎಲ್ಲಿದ್ದರಲ್ಲಿ ಹೋಗಿ ಅವನನ್ನು ಭಕ್ತನನ್ನಾಗಿ ಮಾಡಿ ಪವಿತ್ರಾತ್ಮನನ್ನಾಗಿ ಮಾಡಿದ ಮಹಾನುಭಾವರು ಶ್ರೀ ಗುರುಮಲ್ಲೇಶ್ವರರ ಗುರುಪರಂಪರೆಯವರಲ್ಲಿ ಹೆಚ್ಚು ಶಿಷ್ಯವೃಂದವನ್ನು ಸಂಪಾದಿಸಿದ ಮಹಾ ಶಿವಯೋಗಿಗಳು.

ತೋಂಟದಾರ್ಯರೆಂದರೆ ನಮ್ಮ ಮುಂದೆ ಕಾಣುವ ಚಿತ್ರ ಮಂದಹಸ್ಮಿತ ವದನ. ಇಟ್ಟ ದಿಟ್ಟ ಭಸಿತ, ಕೊರಳೊಳ್ ತಾಳ್ದ ಶಿವಾಕ್ಷಮಾಲೆ, ಶಿರದೊಳ್ ಪರಿಶೋಭಿಸುವ ಕಾವಿಯ ಪೇಟ. ಥಳಥಳನೆ ಹೊಳೆಯುವ

ಕಾವಿಯ ಅಂಗಿ, ಪರಿಶುದ್ಧವಾದ ಶುಭ್ರ ಶ್ವೇತ ಪಂಚೆ, ಕೈಯ್ಯಲ್ಲೊಂದು ಊರುಗೋಲು, ಹೆಗಲಲ್ಲಿ ಇಳಿಯಬಿಟ್ಟ ಕಾವಿವಸ್ತ್ರಗಳಿಂದ ಪರಿಶೋಭಿತರಾಗಿ ರಾಜಠೀವಿಯಲ್ಲಿ ಪದ್ಮಾಸನಾರೂಢರಾಗಿ ಶಾಂತಮುದ್ರೆಯಲ್ಲಿ ಒರಗಿರುವ ಆ ಶಿವಾಭಿನ್ನಭಾವ ಮುದ್ರೆಯ ಮಹಾಯೋಗಿಯ ಭವ್ಯ ರೂಪು ಎದ್ದು ಕಾಣುತ್ತದೆ.

ಭವದ ಜಂಜಾಟದಿಂದ ಪಾರಾಗಿ, ಮೋಕ್ಷಸಾಧನೆಗೆ ಗಿರಿಗಹ್ವರಗಳಲ್ಲಿ ಅಡ್ಡಾಡಬೇಕಾಗಿಲ್ಲ, ಗಡ್ಡ ಬಿಟ್ಟು ಕಾಯವನ್ನು ದಂಡಿಸಿ ತಪಸ್ಸನ್ನು ಮಾಡಬೇಕಾಗಿಲ್ಲ, ಇದ್ದಲ್ಲಿಯೆ ಮೋಕ್ಷಸಾಧನೆ ಸಾಧ್ಯವೆಂದು ಎಲ್ಲರಿಗೂ ಮೋಕ್ಷದ ಸುಲಭವಾದ ಮಾರ್ಗವನ್ನು ತೋರಿದ ಮೋಕ್ಷವರದರಿವರು. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಮಾರ್ಗವನ್ನು ಸುಲಭರೂಪದಲ್ಲಿ ಅರ್ಥಮಾಡಿಸಿ ಭಕ್ತರಲ್ಲಿದ್ದ ಮಲತ್ರಯಗಳನ್ನು ಹೋಗಲಾಡಿಸಿ ಭಕ್ತರ ಕಿವಿಯಲ್ಲಿ ಮಹಾಮಂತ್ರವನ್ನರುಹಿ ಎಲ್ಲರನ್ನೂ ಶಿವಸಾಮ್ರಾಜ್ಯ ಸುಖಲೋಲುಪರನ್ನಾಗಿ ಮಾಡಿದರು. ಮಿಗಿಲಾಗಿ ದಾಸೋಹ ಕಾಯಕದ ಬಗ್ಗೆ ಅವರು ಹಾಕಿದ ಭದ್ರ ಬುನಾದಿ ಆಚಂದ್ರಾರ್ಕವಾಗಿದೆ. ಸ್ವತಃ ಜ್ಞಾನಿಗಳಾದ ಅವರಲ್ಲಿ ಶ್ರೀ ಗುರುಮಲ್ಲೇಶ್ವರರ ವೈರಾಗ್ಯವೂ, ಶ್ರೀ ಭಿಕ್ಷದಾರ್ಯರ ದಾಸೋಹತತ್ವವೂ ಮೂರ್ತಗೊಂಡಿದ್ದುವು.

ಟಿ. ನರಸೀಪುರದ ಬಳಿಯಿರುವ ಮೂಗೂರಿನ ಪಟ್ಟದ ಮಠದಲ್ಲಿದ್ದ ಗುರುಕುಲವಾಸಿಗಳಾದ, ಗುರುಮಲ್ಲೇಶ್ವರರ ಪರಮಭಕ್ತರೂ, ಸದಾಶಿವಪೂಜಾನಿರತರೂ, ದಾಸೋಹಶೀಲರೂ, ಸಚ್ಚರಿತರೂ ಆದ ದಂಪತಿಗಳಿಗೆ ಶ್ರೀ ಗುರುಮಲ್ಲೇಶ್ವರರ ಆಶೀರ್ವಾದದಿಂದ ನೆಪಮಾತ್ರ ಮಗನಾಗಿ ಜನಿಸಿದರು ಶ್ರೀ ತೋಂಟದಾರ್ಯರು. ಬಾಲ್ಯದಿಂದಲೂ ಶಿವಪೂಜೆ, ಶಿವಭಜನೆ, ಶಿವಕೀರ್ತನೆಗಳ ಬಗ್ಗೆ ತುಂಬಾ ಆಸಕ್ತಿ. ಓದಿನಲ್ಲಿ ಬರಹದಲ್ಲಿ ಎಲ್ಲದರಲ್ಲಿಯೂ ಶಿವನಾಮಸ್ಮರಣೆಯೇ ತುಂಬಿತ್ತು. ಪ್ರಾಥಮಿಕ ಶಿಕ್ಷಣದಲ್ಲಿ ತುಂಬಾ ಆಸಕ್ತಿ ವಹಿಸಿದ ಇವರನ್ನು ಇತರ ತಂದೆ ತಾಯಿಗಳು

ಮೈಸೂರಿಗೆ ಸಂಸ್ಕೃತ ಅಭ್ಯಾಸಕ್ಕೆಂದು ಸೇರಿಸಿದರು. ಸುಮಾರು ನಾಲ್ಕು ವರ್ಷ ಓದಿರಬೇಕು. ಆಗ, ಶ್ರೀ ಭಿಕ್ಷದಾರ್ಯರು ಇವರನ್ನು ದೇವನೂರಿಗೆ ಕರೆದುಕೊಂಡು ಬಂದು ತಮ್ಮ ಕರಸಂಜಾತರನ್ನಾಗಿ ಮಾಡಿಕೊಂಡು ಶ್ರೀ ಮಠದ ಸೇವೆಯಲ್ಲಿ ನಿರತರಾಗುವಂತೆ ಮಾಡಿದರು.

ಆಗ ಶ್ರೀ ಮಠದಲ್ಲಿ ಭಿಕ್ಷದವರ ಸರ್ವಾಧಿಕಾರದ ಶ್ವೇತಛತ್ರದಡಿಯಲ್ಲಿ ಅನೇಕ ಶರಣರು, ಶಿಷ್ಯರು ಶ್ರೀ ಮಠದಲ್ಲಿ ಒಂದೊಂದು ಸೇವೆಯಲ್ಲಿ ನಿರತರಾಗಿದ್ದರು. ಭಿಕ್ಷದವರ ಶಿಷ್ಯರಲ್ಲಿ ತೋಂಟದಪ್ಪನವರು ಹೇಗೋ ಹಾಗೆ ಶ್ರೀ ಶಿವಪ್ಪಸ್ವಾಮಿಗಳವರು ಅಭಿನವ ಸಿದ್ಧರಾಮೇಶ್ವರರಂತೆ ಮಠದ ಕಟ್ಟಡದ ನಿರ್ಮಾಣದ ಕಾಯಕದಲ್ಲಿದ್ದರು. ಚೆನ್ನಬಸಪ್ಪಸ್ವಾಮಿಗಳು ಪೂಜಾಕಾರ್ಯದಲ್ಲಿ ನಿರತರಾಗಿದ್ದರು. ತೋಂಟದಾರ್ಯರು ಮಠದಲ್ಲಿದ್ದುಕೊಂಡು ನಿಷ್ಠೆಯಿಂದ ಸೇವೆ ಸಲ್ಲಿಸುತ್ತಾ ತಮ್ಮ ಶಾಂತವಾದ, ಮೌನವಾದ ನಡೆನುಡಿಗಳಿಂದಲೇ ಎಲ್ಲರನ್ನೂ ತಮ್ಮ ಬಳಿಗೆ ಆಕರ್ಷಿಸಿಕೊಳ್ಳುತ್ತಿದ್ದರು.

ಶ್ರೀ ಭಿಕ್ಷದವರು ತಮ್ಮ ಇಷ್ಟಲಿಂಗದಲ್ಲಿ ಬಯಲಾಗುವಾಗ ಶ್ರೀ ಮಠದ ಸೂತ್ರವನ್ನು ಯಾರಿಗಾದರೂ ವಹಿಸಿಕೊಡಿ ಇಲ್ಲದಿದ್ದರೆ ಭಕ್ತರಿಗೆ ಅನುಮಾನ ಬಂದುಬಿಡುತ್ತದೆ, ಸುಮ್ಮನೆ ಒಂದು ಗುರುತು ಮಾಡಿಬಿಡಿ ಎಂದು ಅನೇಕ ಹಿರಿಯ ಭಕ್ತರು ಪರಿಪರಿಯಲ್ಲಿ ಬೇಡಿಕೊಂಡಾಗ, ಭಿಕ್ಷದವರು "ಅಲ್ಲಕಣ್ರೋ ನನಗೆ ಯಾರು ಸೂತ್ರ ಕೊಟ್ಟಿದ್ರೋ? ಗುರುಮಲ್ಲಯ್ಯ ತನ್ನ ಮನೆ ಕೆಲಸವನ್ನು ಒಂದು ಸೆತ್ತೆ ಕೈಲಿ ನಡೇಸಿಕೊಳ್ಳುತ್ತಾನೆ ಹೋಗ್ರೋ" ಎಂದುಬಿಟ್ಟರು. ಆದರೂ ಭಕ್ತರು ಒತ್ತಾಯಪೂರ್ವಕವಾಗಿ ಪ್ರಾರ್ಥಿಸಿದಾಗ ಅಲ್ಲ ಎನ್ನಲಾರದೆ "ಯಾರುಬೇಕು ನಿಮಗೆ ಕರ್‍ಕೊಂಡು ಬನ್ರೋ" ಎನ್ನಲು ಭಕ್ತರೆಲ್ಲಾ ಸೇರಿ ಶ್ರೀ ತೋಂಟದಾರ್ಯರನ್ನು ಕರೆದುಕೊಂಡು ಬಂದು ನಿಲ್ಲಿಸಿದರು. ಆಗ ಶ್ರೀಗಳು ಇವರನ್ನೊಮ್ಮೆ ನೋಡಿ "ಏನಪ್ಪ ನೀನು ಎಲ್ಲರನ್ನೂ ನನ್ನಂತೆ ಕಾಣ್ತೀಯಾ?" ಎಂದರಂತೆ. ಅದಕ್ಕೆ ಸಮ್ಮತಿ ನೀಡಿದ ಶಿಷ್ಯನನ್ನು

"ಹ್ಞೂ ಹೋಗು" ಎಂದರಂತೆ. ಹೀಗೆ ಗುರುಗಳ ಆಜ್ಞಾನುವರ್ತಿಗಳಾಗಿ ಶ್ರೀ ತೋಂಟದಾರ್ಯ ಪ್ರಭುಗಳು ದಿನಾಂಕ 4 ನೇ ಏಪ್ರಿಲ್ 1932 ರಲ್ಲಿ ಶ್ರೀ ಮಠದ ಅಧಿಕಾರವನ್ನು ವಹಿಸಿಕೊಂಡು ತಮ್ಮ ಗುರುಗಳ ಹನ್ನೆರಡು ದಿನಗಳ ಶಿವಗಣಾರಾಧನಾ ಕಾರ್ಯಕ್ರಮವನ್ನು ವೈಭವೋಪೇತವಾಗಿ ನಡೆಸಿದರು.

ತಮ್ಮ ಗುರುಗಳ ವಾಕ್ಯನ್ನು ಸದಾ ಸ್ಮರಿಸುತ್ತಾ ಶ್ರೀ ಮಠದ ಸೇವೆಯಲ್ಲಿ ನಿರತರಾದರು. ಇವರು ಎರಡು ಕಾಯಕಗಳನ್ನು ಹಿಡಿದಿದ್ದರು. ಒಂದು ಜೀವಾತ್ಮರನ್ನು ಪರಮಾತ್ಮರನ್ನಾಗಿ ಮಾಡುವ ಮಹತ್ತರ ಕಾರ್ಯ, ಭಕ್ತರ ಮನೆ ಮನೆಗೆ ಹೋಗಿ ಭಿಕ್ಷೆಬೇಡಿ ತಂದು ತ್ರಿಕಾಲ ದಾಸೋಹ ನಡೆಸುವ ಸಮಾಜಸೇವೆ. ಇವೆರಡರಲ್ಲಿಯೂ ಅತಿ ಯಶಸ್ಸನ್ನೂ ಪುಣ್ಯವನ್ನೂ ಗಳಿಸಿದರು. ತೋಂಟದಪ್ಪನವರಿಗಾದಷ್ಟು ಶಿಷ್ಯರು ಯಾರಿಗೂ ಇಲ್ಲ. ಅವರ ದಾಸೋಹವಂತೂ ಮಹಾ ಯೋಗಭೋಗದಲ್ಲಿ ನಡೆಯಿತು.

ಶ್ರೀಗಳು ತುಂಬಾ ಶಿವಭೋಗಿಗಳು. ಅವರ ಉತ್ಸವ ಮತ್ತು ಪಾದಪೂಜೆಗಳಂತೂ ಚಿರಸ್ಮರಣೀಯವಾದವುಗಳು. ಪ್ರತಿ ದಿನವೂ ಊರಿನ ಒಬ್ಬೊಬ್ಬರ ಮನೆಯಲ್ಲಿಯೂ ಪಾದಪೂಜೆ! ಹರಗುರು ಚರ ಮೂರ್ತಿಗಳಿಗೆ ಒಬ್ಬಟ್ಟು ತುಪ್ಪ! ಅದೆಷ್ಟು ನಡೆಯಿತೋ ಅದೇನು ಗುರುಮಲ್ಲೇಶ್ವರನ ತೃಪ್ತಿಯೋ ಆರಿಗೂ ಅರಿಯದು! ಪಾದಪೂಜೆಯ ಸಂದರ್ಭದಲ್ಲಿ ಇವರ ವರ ಕರಸಂಜಾತರಾಗಲು ಹಾತೊರೆದ ಶಿಷ್ಯರ ಗುಂಪೋ ಗುಂಪು!

ಶ್ರೀಗಳು ಸ್ವಾಭಾವಿಕವಾಗಿ ಶಾಂತರು, ಮೆದು ನುಡಿಯವರು ಮೃದು ಸ್ವಭಾವದವರು. ಇವರ ಈ ದೇವಗುಣವನ್ನು ಅಂದು ಮಠದಲ್ಲಿದ್ದ ಕೆಲವೇ ಸ್ವಾರ್ಥಿಗಳು ದುರುಪಯೋಗ ಪಡಿಸಿಕೊಂಡು ಶ್ರೀಮಠದ ಆಸ್ತಿ

ಶಾಸ್ತ್ರಿಗಳನ್ನು ಲೂಟಿ ಮಾಡಲು ಅನುವಾದರು. ಮೃದು ಪ್ರಭಾವದ ಶ್ರೀಗಳು ಗುರುಮಲ್ಲೇಶ್ವರನ ಸೊತ್ತನ್ನು ಯಾರು ಉಂಡು ದಕ್ಕಿಸಿ ಕೊಂಡಾರು ಬಿಡು, ಎಂದು ಸುಮ್ಮನಾದರು. ಆ ಸ್ವಾರ್ಥಿಗಳನ್ನು ಅವರು ಪ್ರಶ್ನಿಸಲೇ ಇಲ್ಲ, ಅವರ ಬದಲು ಭಕ್ತರು ಪ್ರಶ್ನಿಸಿದರು, ಅವರಿಗೆ ತೀರ್ಪು ಹೈಕೋರ್ಟಿನಿಂದಲೇ ಬಂದು ಈ ಮಠ ಭಕ್ತಾಧೀನವೆಂದು ಪಾಠ ಕಲಿಸಿತು.

ಶ್ರೀಗಳವರು ದಕ್ಷಿಣ ಕರ್ನಾಟಕವೇಕೆ ಇಡೀ ನಾಡಿನಲ್ಲಿಯೇ ಯಾರೂ ಮಾಡಿರದ ಮಹತ್ತರ ಸೇವೆಯನ್ನು ಕೈಗೊಂಡರು. ಅದು "ಅರವತ್ತು ಮೂರು ಪುರಾತನರ ಪೂಜೆ" ಮತ್ತು "ಶ್ರೀ ಗುರು ಮಲ್ಲೇಶ್ವರರ ಸುವರ್ಣ ಮಹೋತ್ಸವ" ಈ ಮಹೋತ್ಸವವನ್ನು ಕಂಡು ಕೇಳಿದ ಅನೇಕ ಭಕ್ತರು ಇಂದಿಗೂ ಹೇಳುವರು ಅದೊಂದು ವೈಭವದ ಮಹೋತ್ಸವ. ಶ್ರೀ ಕೈಲಾಸದ ಗಣಂಗಳ ಮಂಟಪಗಳಂತೆ ಕಂಗೊಳಿ ಸುತ್ತಿದ್ದ ಅರವತ್ತು ಮೂರು ಪುರಾತನರ ಮಂಟಪಗಳು. ಪ್ರತಿಯೊಂದು ಮಂಟಪಕ್ಕೂ ಒಬ್ಬೊಬ್ಬ ಪುರಾತನರ ಹೆಸರು, ಅಲ್ಲಿ ಒಬ್ಬ ಸ್ವಾಮಿ ಪುರಾತನರನ್ನು ಪ್ರತಿನಿಧಿಸುವವರು, ಮತ್ತೊಬ್ಬರು ಪೂಜ್ಯ ಮೂರ್ತಿ ಗಳು, ಇನ್ನೊಬ್ಬರು ಪೂಜಕರು. ಹೀಗೆ ಅರವತ್ತು ಮೂರು ಮಂಟಪಗ ಳಿಗೂ ಮೂವರು ಮೂವರಂತೆ ನೂರ ಎಂಭತ್ತೊಂಭತ್ತು ಮಂದಿ ಪರ ಗುರು ಚರಮೂರ್ತಿಗಳು ಜ್ವಾಜ್ವಲ್ಯಮಾನವಾಗಿ ಕಂಗೊಳಿಸಿ ಪೂಜೆ ಪಡೆದುಕೊಳ್ಳುತ್ತಿದ್ದ ದೃಶ್ಯ ಕೈಲಾಸದ ಶಿವನ ಸುತ್ತ ನೆರೆದ ಅಮರ ಗಣಂಗಳ ಸುಂದರ ದೃಶ್ಯವನ್ನು ನೆನಪುಮಾಡಿಕೊಡುತ್ತಿತ್ತು. ಅಂದಿನ ಆ ವೈಭವೋತ್ಸವದಲ್ಲಿ ಶ್ರೀ ಸುತ್ತೂರು ವೀರಸಿಂಹಾಸನಾಧೀಶ್ವರರಾದ ಜಗದ್ಗುರು ಶ್ರೀ ಶಿವರಾತ್ರಿಸ್ವಾಮಿಗಳೂ, ಶ್ರೀ ಸಿದ್ಧಗಂಗಾ ಮಠಾಧೀಶ ರಾದ ಶ್ರೀ ಶಿವಕುಮಾರಸ್ವಾಮಿಗಳೂ, ಮೈಸೂರು ಗವಿಮಠಾಧೀಶರಾದ ಶ್ರೀ ಗೌರೀಶಂಕರ ಮಹಾಸ್ವಾಮಿಗಳವರೂ ಆಗಮಿಸಿ ಉತ್ಸವಕ್ಕೆ ಮೆರೆಗು ತಂದಿದ್ದರು. ಅತ್ಯಭೂತಪೂರ್ವವಾಗಿ ನಡೆದ ಶ್ರೀ ಗುರುಮಲ್ಲೇಶ್ವರರ

ಸುವರ್ಣಮಹೋತ್ಸವಕ್ಕೆ ಬಂದಿದ್ದ ಭಕ್ತರು ಶ್ರೀ ಗುರು ತೋಂಟ ದಾರ್ಯರನ್ನು ಬಾಯಿ ತುಂಬಾ ಭಕ್ತಿಯಿಂದ ಕೊಂಡಾಡಿದರು.

ಶ್ರೀ ಗುರುಮಲ್ಲೇಶ್ವರರ ಶಾಖಾಮಠಗಳ ನಿರ್ಮಾಣ ಶ್ರೀ ಭಿಕ್ಷದ ವರ ಕಾಲದಲ್ಲಿ ಆರಂಭಗೊಂಡು ಇಂದಿಗೂ ಶಾಖಾಮಠಗಳ ಸಂಖ್ಯೆ ಹೆಚ್ಚುತ್ತಲೇ ಇದೆ. ಶ್ರೀ ತೋಂಟದಪ್ಪನವರ ಕಾಲದಲ್ಲಿ ಈ ಸಂಖ್ಯೆ ಅವಿರಳವಾಗಿ ಏರಿತು. ಈ ಶಾಖಾಮಠಗಳೂ ಸಹ ಕೇಂದ್ರ ಮಠದ ತತ್ವವನ್ನು ಚಾಚೂ ತಪ್ಪದೆ ನಡೆಸಿಕೊಂಡು ಹೋಗುವ ಧಾರ್ಮಿಕ ಕೇಂದ್ರಗಳು. ಇವು ತಮ್ಮ ಸುತ್ತುಮುತ್ತಣ ಸಮಾಜದವರಿಗೆ ವೀರಶೈವ ತತ್ವವನ್ನು ಬೋಧಿಸುವುದಲ್ಲದೆ ಮನೆ ಮನೆಗೆ ಹೋಗಿ ಕಂಥೇಭಿಕ್ಷದ ಕಾಯಕ ಮಾಡಿ ದಾಸೋಹ ನಡೆಸುವುದು ಈ ಮಠಗಳ ಗುರಿ. ಇದಲ್ಲದೆ ಶಿವಭಜನೆ, ಶಿವಕೀರ್ತನೆ, ಜಂಗಮೋತ್ಸವ ಧಾರ್ಮಿಕ ಸಭೆಗಳನ್ನೇರ್ಪ ಡಿಸಿ ಧರ್ಮಬೋಧೆ ಮಾಡುವುದು ಇತ್ಯಾದಿ ಹಲವು ತೆರನಾದ ಧಾರ್ಮಿಕ ಕ್ರಿಯಾಚರಣೆಯಲ್ಲಿ ಈ ಪ್ರತಿಯೊಂದು ಮಠವೂ ನಿರತವಾಗಿವೆ. ದೇಶ ನೂರು ಮಠದ ಗುರು ಪರಂಪರೆಯವರು ಸದ್ದು ಗದ್ದಲವಿಲ್ಲದೆ ಧಾರ್ಮಿಕ ಬೆಳವಣಿಗೆಗೆ ಟೊಂಕ ಕಟ್ಟಿ ಸೇವೆ ನಡೆಸಿದರು. ಅವರ ಅಹಿಂಸಾತ್ಮಕ ವಾದ ಈ ಬೆಳವಣಿಗೆ ಸಮಾಜವಾದದ ತತ್ವವನ್ನು ಅನುಸರಿಸಿ ನಡೆದಿದೆ. ಜಾತಿಮತ, ಅಂತಸ್ತು, ಅಧಿಕಾರ, ಹುಟ್ಟು ಬೆಳವಣಿಗೆಗಳ ವ್ಯತ್ಯಾಸ ವಿಲ್ಲದೆ ಎಲ್ಲರನ್ನೂ ಬಾ ಎನ್ನುವ ಶರಣಸ್ಥಲದ ಈ ಕೇಂದ್ರ ಸಮಭಾವನೆ ಯಿಂದ ಸರ್ವರ ಏಳಿಗೆಗೂ ಸದಾ ದುಡಿಯುತ್ತಿರುವುದಾಗಿದೆ. ಇದಕ್ಕೋಸ್ಕ ರವೇ ಶ್ರೀಗಳು ಹಳ್ಳಿಹಳ್ಳಿಗಳನ್ನು ಸಂಚಾರ ಮಾಡಿ ಶಾಖಾ ಮಠಗಳ ಪುರೋಭಿವೃದ್ಧಿಗೆ ತುಂಬಾ ಶ್ರಮಿಸಿದರು.

ಇದಲ್ಲದೆ ಮೊಟ್ಟಮೊದಲು ವಿದ್ಯಾರ್ಥಿ ನಿಲಯಗಳನ್ನೂ, ಶ್ರೀ ಗುರುಮಲ್ಲೇಶ್ವರ ಆಶ್ರಮಗಳನ್ನೂ ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಹೆಚ್ಚು ಅನುಕೂಲ ಮಾಡಲು ಮುಂದೆ ಬಂದ ಗುರುವರ್ಗದಲ್ಲಿ ಇವರೇ ಆದ್ಯರು. ಆಧುನಿಕ ವಿದ್ಯಾಭ್ಯಾಸದ ಪದವಿಗಳಿಲ್ಲದಿದ್ದರೂ ಆಧುನಿಕ ಕಾಲದ ಬದ

ಲಾವಣೆಯ ಅರಿವಿತ್ತು ಇವರಲ್ಲಿ. ಯುಗಧರ್ಮಕ್ಕೆ ತಕ್ಕಂತೆ ತಮ್ಮ ಸೇವೆಯನ್ನು ಸಲ್ಲಿಸುವ ಶಕ್ತಿಯಿತ್ತು. ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಬೇಕಾಗಿದ್ದ ಈ ಕಾಲದಲ್ಲಿ ಮಠಾಧಿಪತಿಗಳೂ ಇಂತಹ ಕೆಲಸಕ್ಕೆ ಪ್ರೋತ್ಸಾಹ ನೀಡಬೇಕು. ಅಂತಹ ಪ್ರೋತ್ಸಾಹವನ್ನಿತ್ತು ಮೈಸೂರಿನಲ್ಲಿ ಒಂದು ಶ್ರೀ ಗುರುಮಲ್ಲೇಶ್ವರ ಆಶ್ರಮ, ಕೊಳ್ಳೇಗಾಲದಲ್ಲಿ ಒಂದು ಆಶ್ರಮ, ದೇವನೂರಿನಲ್ಲಿ ಶ್ರೀ ಗುರುಮಲ್ಲೇಶ್ವರ ಉಚಿತ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಬಡವರಿಗೆ, ದೀನದಲಿತರಿಗೆ ಜಾತಿಮತಗಳ ಭೇಧವಿಲ್ಲದೆ ಊಟ ವಸತಿ ಸೌಕರ್ಯಗಳನ್ನೇರ್ಪಡಿಸಿ "ದಯವೇ ಬೇಕು ಸಕಲಪ್ರಾಣಿಗಳಲ್ಲಿ ದಯವಿಲ್ಲದ ಧರ್ಮಏವುದಯ್ಯಾ.... .... ...." ಎಂಬ ಅಣ್ಣನವರ ಉಕ್ತಿಯಂತೆ ಶ್ರೀಗಳು ತಮ್ಮ ದಯಾಮಯ ಭಾವವನ್ನು ಪ್ರಕಟಗೊಳಿಸಿದರು.

ಹೀಗೆ ಎಡೆಬಿಡದೆ ಶ್ರೀ ಗುರುಮಲ್ಲೇಶ್ವರರ ಪಥದಲ್ಲಿಯೇ ನಡೆದು ಹೆಚ್ಚುವರ್ಷಗಳ ಕಾಲ ಶ್ರೀ ಮಠದ ಸೇವೆ ಮಾಡಿದ ಇವರು ಇನ್ನು ತಮ್ಮ ಸೇವೆ ಸಾಕೆಂದು ದೇಹ ಬಾಧೆಯ ನೆಪದಿಂದ ಹಾಸಿಗೆ ಹಿಡಿದರು. ತಮ್ಮ ಗುರುಗಳು ಸ್ವಾಸ್ಥವಿಲ್ಲದೆ ಹಾಸಿಗೆ ಹಿಡಿದಿರುವರೆಂಬ ಸುದ್ದಿ ಕೇಳಿದ ಅಗಣಿತ ಭಕ್ತವೃಂದ ತಮ್ಮ ಗುರುದರ್ಶನಾರ್ಥವಾಗಿ ಬಂದು ತಮ್ಮ ಭಕ್ತಿಯನ್ನು ಸಲ್ಲಿಸಿ ಹೋಗುತ್ತಿದ್ದರು. ಅವರನ್ನು ದರ್ಶನ ಮಾಡಲು ಬಂದ ಭಕ್ತರು ಪ್ರೀತಿಯಿಂದ ನೀಡಿದ ಕಾಣಿಕೆಯು ಅವರ ಹಾಸಿಗೆಯ ಬಳಿ ರಾಶಿರಾಶಿಯಾಗಿ ಬಿದ್ದಿತ್ತು ಇದನ್ನು ಈ ಲೇಖಕನೇ ಕಂಡಿರುವುದರಿಂದ ಬೇರೆ ನಿದರ್ಶನ ಬೇಕಿಲ್ಲ. ಶ್ರೀಗಳು ತಮ್ಮ ಶರೀರ ಬಾಧೆಯನ್ನು ಶಾಂತವಾಗಿ, ಒಮ್ಮೆಯಾದರೂ ಮುಮ್ಮಲ ಮರುಗದೆ, ನರಳದೆ ಅದೇ ಶಾಂತ ಭಾವದಲ್ಲಿ ಸಹಿಸಿಕೊಂಡು ಅದೇ ಮಂದಸ್ಮಿತವದನದಲ್ಲಿ ಮಲಗಿದ್ದರು. ಬಂದ ಭಕ್ತರನ್ನು ಕಣ್ಸನ್ನೆಯಲ್ಲಿಯೇ ಹಾರೈಸಿ 'ಊಟಮಾಡು ಹೋಗು' ಎಂದು ಸನ್ನೆ ಮಾಡುತ್ತಿದ್ದರು. ಹೀಗೆ ಸದಾ ಗುರುಮಲ್ಲೇಶನ ನೆನಪಿನಲ್ಲಿಯೇ ಮಗ್ನರಾಗಿದ್ದ ಗುರುಗಳು ಶ್ರೀ ಗುರುವಿನ ಪಾದ ಕಮಲದಲ್ಲಿ ಲೀನವಾದರು.



ದೇವನೂರಿನಲ್ಲಿರುವ ಶ್ರೀ ಗುರುಮಲ್ಲೇಶ್ವರ ಉಚಿತ
ವಿದ್ಯಾರ್ಥಿನಿಲಯ



ಶ್ರೀ ಗುರುಮಲ್ಲೇಶ್ವರರ ಗದ್ದಿಗೆಯ ಸಮ್ಮುಖದಲ್ಲಿರುವ
ಶಿವಶರಣರ ವರ್ಣಚಿತ್ರಗಳು

ಹನ್ನೆರಡು ದಿಸಗಳವರೆಗೆ ಏಕಪ್ರಕಾರವಾಗಿ ಪೂಜೆ ನಡೆದು ಹನ್ನೆರಡನೇ ದಿನ ಅಖಂಡ ಭಕ್ತಸಮೂಹವೇ ಸೇರಿ ಅದ್ದೂರಿಯಿಂದ ತಮ್ಮ ಗುರುವಿನ ಸೇವೆಯನ್ನು ಸಲ್ಲಿಸಿತು.

ಈ ಮಹಾನುಭಾವರು ಶ್ರೀಮಠಕ್ಕೆ ಸಲ್ಲಿಸಿದುದರ ಪ್ರತಿಫಲವನ್ನು ಇಂದಿನ ಮಠಾಧೀಶರಾದ ಶ್ರೀಮರ್ನ ನಿರಂಜನ ಮಹಾಂತಸ್ವಾಮಿಗಳವರು ತೋರಿಸುತ್ತಿದ್ದಾರೆ. ಉದಾರ ಚರಿತರೂ, ಶ್ರೀ ಗುರುಮಲ್ಲೇಶನ ಪರಮ ಭಕ್ತರೂ ಆದ ಈ ಮಹಾಸ್ವಾಮಿಗಳು ಶ್ರೀ ಗುರುಮಲ್ಲೇಶ್ವರರ ವಜ್ರ ಮಹೋತ್ಸವವನ್ನು ಆಚರಿಸುತ್ತಿರುವ ಪವಿತ್ರ ಸಂದರ್ಭದಲ್ಲಿ ಶ್ರೀ ಭಿಕ್ಷದ ಗುರುಗಳ ಮತ್ತು ಶ್ರೀ ತೋಂಟದಾರ್ಯರುಗಳ ನಿಜ ನಿವಾಸದ ಮೇಲೆ ಸುಂದರವಾದ ಗೋಪುರಗಳನ್ನು ನಿರ್ಮಿಸಿ ಅವುಗಳ ಮೇಲೆ ಆ ಮಹಾನುಭಾವರ ಸೇವೆಯ ಸಂಸ್ಮರಣೆಗಾಗಿ ಸುವರ್ಣ ಕಲಶಾರೋಹಣ ಮಾಡಿಸುತ್ತಿರುವುದು ಇಡೀ ಭಕ್ತಮಂಡಲಿಗೆ ಹೆಮ್ಮೆಯ ಸಂಗತಿಯಾಗಿದೆ! ಮಹಾನುಭಾವರೆನಿಸಿಕೊಂಡವರನ್ನು ಅವರ ನಿಜರೂಪು ಮರೆಯಾದ ಮೇಲೆ ನೋಡು ಎಂದು ಹೇಳುವಂತೆ ಇವರು ಮಾಡಿದ ಘನ ಸೇವೆಗೆ ಸುವರ್ಣ ಕಲಶವನ್ನಿಟ್ಟ ಶ್ರೀ ಮಹಂತಸ್ವಾಮಿಗಳು ಅದೆಷ್ಟು ಧನ್ಯರು! ಅವರು ಪಾವನಮೂರ್ತಿಗಳು, ಉದಾರಚರಿತರು, ದಾಸೋಹಮೂರ್ತಿಗಳು ಎಂಬುದನ್ನು ಇಲ್ಲಿ ವರ್ಣಿಸಲಸದಳವಾಗಿರುವುದರಿಂದ ಶ್ರೀ ಗಳ ಪಾದಕ್ಕೆ ಮತ್ತೊಮ್ಮೆ 'ನಮೋ ನಮೋ' ಎಂದು ಶಿರಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸೋಣ.



## ಅಧ್ಯಾಯ ೧೩

"ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಶರಣವಾಣಿಯಂತೆ, ಶರಣರ ಮನೆಯ ಸೇವಕರಂತೆ ದುಡಿದವರು ಶ್ರೀ ಗುರುಮಲ್ಲೇಶ್ವರರ ಗುರುಪರಂಪರೆಯವರು. ಸಕಲ ಜೀವಿಗಳಿಗೂ ಲೇಸನೇ ಮಾಡುವ ಮಹದಾಸೆಯಿಂದ ಸೇವೆ ಸಲ್ಲಿಸಿದವರು ಇವರು. ಸತ್ಯ ಶುದ್ಧ ಕಾಯಕದಲ್ಲಿ ನಿರತರಾಗಿ ಗಳಿಸಿದುದನ್ನು ಗುರು–ಲಿಂಗ–ಜಂಗಮ ಕಿಗೆ ಸಮಾಜಸೇವೆಗೆ ದೀನದಲಿತೋದ್ಧಾರಕ್ಕೆ, ಶಿವಜ್ಞಾನ, ಶಿವತತ್ವ ಪ್ರಸಾರಕ್ಕೆ ವಿನಿಯೋಗಿಸಿದ ಮಹಾತ್ಮರು ಈ ಗುರು ಪರಂಪರೆಯವರು, ಅಖಂಡ ವೀರಶೈವ ತತ್ವವನ್ನು ಏಕೀಭವಿಸಿ ಎರಕಹೊಯ್ದು ಅದರ ಸವಿ ಯನ್ನು ಎಲ್ಲರಿಗೂ ಹಂಚಿ ಮಾನವರನ್ನು ದೇವರನ್ನಾಗಿ ಮಾಡಿದ ದೇವ ಮಾನವರಿವರು. ಸರ್ವ ಸಮಾನತೆಯ ಭಾವದಿಂದ ಆಧುನಿಕ ಸಮಾಜ ವಾದದ ಕಹಳೆಯನ್ನು ಶತಮಾನದ ಹಿಂದೆಯೇ ಮೊಳಗಿಸಿದವರಿವರು. ನಮ್ಮ ಗುರುಪರಂಪರೆಯವರ ಸಾಧನೆ ಇದಾಗಿತ್ತು—

"ಪಾವನ ಪರಮೈಕ್ಯತೆಯ ಸಾಧಿಸುವುದೇ ಸಾಧನಾ |
ದೇವನೂರ ಮಠದೊಳಿರಲು ಸಾಧಿಸುವುದೇ ಸಾಧನಾ !
ದೇವ ಗುರುಮಲ್ಲೇಶ್ವರಾಂಘ್ರಿ ಸಾಧಿಸುವುದೇ ಸಾಧನಾ |
ಸೇವಕಶಿಶು ಬಸವನ ಮನ ಸಾಧಿಸುವುದೇ ಸಾಧನಾ |"

ಭಕ್ತಿಭಂಡಾರಿ ಬಸವಣ್ಣನವರಂತೆಯೇ ಇಹದಲ್ಲಿ ಅಲ್ಪಕಾಲ ಮೈದೋರಿ ಶ್ರೀ ಮಠಾಧ್ಯಕ್ಷರಾಗಿ, ನಿಗೂಢವೂ, ಅಬೇಧ್ಯವೂ, ಅದ್ವಿತೀ



ಶ್ರೀ ಶಿವಪ್ಪಸ್ವಾಮಿಗಳ ಕರಸಂಜಾತರಾದ

ಶ್ರೀ ಬಸವಣ್ಣ ಮಹಾಸ್ವಾಮಿಗಳು

ಯುವೂ ಆದ ಶ್ರೀ ಗುರುಮಲ್ಲೇಶ್ವರರ ತತ್ವವನ್ನು ಚಾಚೂ ತಪ್ಪದೆ ನಡೆಸಿಕೊಂಡು—

" ಶಾಂತಿ ಸೈರಣೆ ಶಮೆ ದಮೆಯು ಕೃ |
ಪಾಂತಃಕರಣವು ಸದುವಿವೇಕವು |
ಸ್ವಾಂತದೊಳು ಭಯಭಕುತಿ ವಿಶ್ವಾಸಗಳು
ತ್ರಿವಿಧದೊಳು ||
ಸಂತತಂ ಸತ್‌ಕ್ರಿಯೆ ಸದಾಚಾ |
ರಾಂತು ನಡೆನುಡಿ ಏಕ ಮನದೃಢ |
ವಾಂತ ಸೇವೆ .... .... .... .... ...."

ಹೀಗೆ ಕಾಯಕರಣಗಳ ಶುದ್ಧಿಯಿಂದ ಸೇವೆ ಮಾಡುವುದಕ್ಕಾಗಿಯೇ ಬಂದ ಸೇವಾಮೂರ್ತಿ ಶ್ರೀ ಬಸವಣ್ಣ ಮಹಾಸ್ವಾಮೀಜಿಯವರು ಗುಂಡ್ಲುಪೇಟೆ ತಾಲ್ಲೋಕಿನ ಭೋಗೈಯ್ಯನಹುಂಡಿ ಗ್ರಾಮದಲ್ಲಿ ಶ್ರೀ ಗುರುಮಲ್ಲೇಶ್ವರನಿಗಲ್ಲದೆ, ಶ್ರೀ ಗುರುಮಲ್ಲೇಶನ ಗುರುಪರಂಪರೆಯವರಿಗಲ್ಲದೆ ಅನ್ಯರಿಗೆ ಕೈಮುಗಿಯದ, ಅನ್ಯ ದೈವಕ್ಕೆ ಪೂಜೆಕೊಡದ ಮಾತಾಪಿತೃಗಳಿಗೆ ನೆಪಮಾತ್ರಕ್ಕೆ ಮಗನಾಗಿ ಒಂದು ಶುಭ ದೀಪಾವಳೀ ಭಾನುವಾರ ರಾತ್ರಿ ಅಮಾವಾಸ್ಯೆ (1917) ಯಂದು ಅವತರಿಸಿದರು, ಜಗತ್ತನ್ನು ಆವರಿಸಿರುವ ಅಜ್ಞಾನಾಂಧಕಾರವನ್ನು ಹೊಡೆದೋಡಿಸಲು ಉದಯವಾದ ಬಾಲಸೂರ್ಯನಂತೆ ಆ ಕಗ್ಗತ್ತಲೆಯಲ್ಲಿ ಪರಂಜ್ಯೋತಿ ಸ್ವರೂಪನ ಉದಯವಾಯಿತು. ಆ ದಿನ ಹುಟ್ಟಿದವರು ಮಹಾಯೋಗಿಗಳು ಅಥವಾ ದೊಡ್ಡ ಅಧಿಕಾರಿಗಳು ಆಗುವರೆಂದು ನಂಬಿಕೆ. ಆ ಮಾತು ನಿಜವೆಂಬಂತೆ ಮುಂದೆ ಘನಲಿಂಗ ಶರಣರಾದರು.

ಶ್ರೀ ಭಿಕ್ಷದಾರ್ಯ ಪ್ರಭುಗಳು, ಶ್ರೀ ಶಿವಪ್ಪಮಹಾಸ್ವಾಮಿಗಳೇ ಮುಂತಾದ ಅಂದಿನ ಶರಣರು, ಜಂಗಮಪುಂಗವರು ಇರವ ಮನೆಗೆ

ಹೋಗುತ್ತಾ ಬರುತ್ತಾ ಇದ್ದರು. ಪರುಷ ಸ್ಪರ್ಶವಾದ ಕಬ್ಬುನದಂತೆ, ಭೃಂಗ ಸ್ಪರ್ಶವಾದ ಕೀಟದಂತೆ ಬಸವಣ್ಣನವರು ಬಸವಣ್ಣನೇ ಆಗುತ್ತಾ ಬಂದರು.

ಶ್ರೀ ಗುರುಮಲ್ಲೇಶ್ವರರ ಗದ್ದಿಗೆಯಲ್ಲಿ ಮರಿಯಾಲದ ಮಠದ ಪಟ್ಟದ ಮಹಾಂತಸ್ವಾಮಿಗಳವರಿಂದ ಜಂಗಮ ದೀಕ್ಷಾನುಗ್ರಹವಾಯಿತು. ಅಂದು ಅವರ ಗುರುಗಳು ತಮ್ಮ ಅಂತಃಶಕ್ತಿಯಿಂದ ತಮ್ಮ ಈ ಶಿಷ್ಯ ಮುಂದೆ ಬಸವಣ್ಣನೇ ಆಗಿ ಮೆರೆಯುವನೆಂದರಿತೊ ಏನೊ ಅವರ ಹಳೆಯ ಹೆಸರಾದ 'ಜುಂಜಪ್ಪ' ಎಂಬದನ್ನು ಬದಲಿಸಿ "ಬಸವಣ್ಣ" ನೆಂದು ಕರಸಿ ಮಸ್ತಕದ ಮೇಲೆ ಹಸ್ತವಿಟ್ಟು "ಜುಂಜಪ್ಪ ಎಂದರೆ ಮಾತಾಡ ಬೇಡ, ನೀನು ಬಸವಣ್ಣ" ಎಂದು ಆಶೀರ್ವದಿಸಿದರು. ಕಾಲಕ್ರಮದಲ್ಲಿ ಅವರ ಸಾಹಿತ್ಯ ನಿರ್ಮಾಪಕ ಶಕ್ತಿಯನ್ನೂ, ಅವರ ಪ್ರತಿಭೆಯನ್ನೂ ಅರಿತ ಅವರ ಗುರುಗಳಾದ ಶ್ರೀ ಶಿವಪ್ಪಸ್ವಾಮಿಗಳವರು ಪ್ರೀತಿಗೆ 'ಬಸವಣ್ಣಶಾಸ್ತ್ರಿ' ಎಂದರು. ದೇವನೂರು ಮಠದ ಸೇವಾವೃತ್ತಿಯಿಂದ ಅವರು ಸದ್ಗುರು ಶ್ರೀ ಬಸವಣ್ಣ ಮಹಾಸ್ವಾಮೀಜಿಯಾದರು.

ಕಬ್ಬಹಳ್ಳಿ ಮತ್ತು ಸರಗೂರಿನಲ್ಲಿ ಅತಿಯಾದ ಕಷ್ಟದಲ್ಲಿ ಬೇರೆಯವರ ಮನೆಯಲ್ಲಿ ಮನೆಗೆಲಸಮಾಡಿಕೊಂಡು ತಮ್ಮ ಪ್ರಾಥಮಿಕ ಶಿಕ್ಷಣವನ್ನು ನಡೆಸಿದರು. ಒಮ್ಮೆ ಇದನ್ನರಿತ ಶ್ರೀ ಭಿಕ್ಷದವರು ಇವರ ತಂದೆಯ ಬಳಿ "ಕಲಿತವನಿಗೆ ವಿದ್ಯೆಯಾಕೆ? ಓದಿದವನಿಗೆ ಓದೇಕೆ? ಹಾಗೆ ಓದಬೇಕೆಂದರೆ ಬೆಂಗಳೂರವರೆಗೂ ಓದಬಹುದಪ್ಪಾ" ಎಂದರಂತೆ ಅವರ ದೃಷ್ಟಿಯಲ್ಲಿ ಬಸವಣ್ಣಸ್ವಾಮಿಗಳು ಹುಟ್ಟು ವಿದ್ಯಾವಂತರಾಗಿದ್ದರು. ಅಜ್ಞಾನದಿಂದ ಆ ತಂದೆ ತಾಯಿಗಳಿಗೆ ಇದು ತಿಳಿಯದೆ ಜಂಗಮರೋರ್ವರ ಸಲಹೆಯಂತೆ ಬೆಂಗಳೂರಿಗೂ ಓದಲು ಕಳುಹಿಸಿದಾಗ ಅಂದಿನ ಲೋಯರ್ ಸೆಕಂಡರಿ ತಲುಪಿದರು, ಆದರೆ ಮುಂದುವರಿಸಲಾಗಲಿಲ್ಲ. ತಮ್ಮ ಮಾತೆಯವರಿಗೆ ಖಾಯಿಲೆಯಾದ ಪ್ರಯುಕ್ತ ಅವರನ್ನು ನೋಡುವುದಕ್ಕೆ ತಮ್ಮ ಗ್ರಾಮಕ್ಕೆ ಹಿಂತಿರುಗಿದರು ಮತ್ತೆ ಬೆಂಗಳೂರಿಗೆ ಹೋಗಲೇ ಇಲ್ಲ.

ಬೆಂಗಳೂರವರೆಗೂ ಓದಬಹುದು ಅಷ್ಟೆ; ಆದರೆ ಆ ಓದು ಇವರಿಗೆ ಬೇಕಾಗಿರಲಿಲ್ಲ.

ಲೌಕಿಕ ಬಂಧನಗಳಿಂದ ಜನರನ್ನು ಬಿಡಿಸಲು ಬಂದಿದ್ದ ಮಹಿಮನನ್ನು ಅವರ ತಂದೆ ತಾಯಿಯರು ತಮ್ಮ ನೆರೆಯ ಗ್ರಾಮವಾದ ಹಾಲಹಳ್ಳಿಯ ಧನಿಕರೋರ್ವರಿಗೆ ದತ್ತುಮಾಡಿ ಕಳುಹಿಸಿಕೊಟ್ಟರು. ದತ್ತು ಪುತ್ರನಾಗಿ ಅವರ ಮನೆಯ ಬೇಸಾಯದ ಕೆಲಸದಲ್ಲಿ ನಿರತರಾದರು. ಜನಮನದಲ್ಲಿ ಬೆಳೆಯುತ್ತಿರುವ ಪಾಪದ ಬೆಳೆಯನ್ನು ಕಿತ್ತು ಧರ್ಮದ ಬೇಸಾಯ ಮಾಡುತ್ತಿರುವರೋ ಎಂಬಂತೆ ತಮ್ಮ ಹೊಲದಲ್ಲೊಮ್ಮೆ ಬೇಸಾಯ ಮಾಡುತ್ತಿದ್ದಾಗ ಶ್ರೀ ಶಿವಪ್ಪಸ್ವಾಮಿಗಳು ದಾರಿಯಲ್ಲಿ ಹೋಗುತ್ತಿದ್ದು ಇವರನ್ನು ಕಂಡು "ಇನ್ನೂ ಉಳುವುದು ಸಾಕಗಲೇ ಇಲ್ವೆ?" ಎಂದು ಎಚ್ಚರಿಸಿದರು, ಮತ್ತೊಂದು ಬಾರಿಯೂ ಹಾಗೆಯೇ ಎಚ್ಚರಿಸಿದರು. ಈ ಮಧ್ಯದಲ್ಲಿ ಇವರಿಗೆ ಮದುವೆಮಾಡಲು ಇವರ ದತ್ತು ತಂದೆ ಪ್ರಯತ್ನಪಟ್ಟು ಅವರ ಗುರುಗಳಾದ ಸೋಮಹಳ್ಳಿ ಪಟ್ಟ ಸಿದ್ಧಮಲ್ಲಿಕಾರ್ಜುನಸ್ವಾಮಿಗಳವರಲ್ಲಿ ಬಿನ್ನೈಸಿಕೊಂಡರು. ಆ ಶ್ರೀಗಳು ಅದೇನೋ ಆ ವರ್ಷ ಬೇಡ ಮುಂದೆ ಮಾಡುವೆಯಂತೆ, ತಾವೇ ನಿಂತು ಇವರ ಮದುವೆ ವ್ಯವಹಾರವನ್ನು ಮುಂದಿನ ವರ್ಷ ನಡೆಸೋಣವೆಂದು ತಡೆಮಾಡಿದರು. ಇತ್ತ ಭೋಗನಪುರದಲ್ಲಿ ಶ್ರೀಗಳವರ ಮುತ್ತಮ್ಮನಿಗೆ ಹರಳುರೋಗ ಆವರಿಸಿಕೊಂಡು ಮುತ್ತಮ್ಮನಿಗೆ ತಮ್ಮ ಮರಿಮಗನ ನೆನಪಾಗಿ ಹಾಲಹಳ್ಳಿಯಿಂದ ಕರೆಸಿಕೊಂಡು "ಮಗು ನೀನಿನ್ನು ಮತ್ತೆ ನಿನ್ನ ದತ್ತು ತಂದೆಯ ಮನೆಗೆ ಹೋಗಬೇಡ, ಖಂಡಿತಾ ನನ್ನ ಬಳಿಯೇ ಇರು. ಮತ್ತೆ ಹೋಗುವುದಿಲ್ಲವೆಂದು ಭಾಷೆ ಕೊಡು" ಎಂದು ಭಾಷೆ ತೆಗೆದುಕೊಂಡರು. ಇದು ಶ್ರೀಗಳವರ ಜೀವನದಲ್ಲಿನ ಒಂದು ತಿರುಗುಮೂಲೆ—ಲೌಕಿಕತೆಯಿಂದ ಅಲೌಕಿಕತೆಗೆ ತಿರುಗಿದ, ಕತ್ತಲೆಯಿಂದ ಬೆಳಕಿನತ್ತ ಹೊರಳಿದ ಸನ್ನಿವೇಶ. ಗುರುಗಳಿಗೆ ಸಹಜ ಪ್ರತಿಭೆ ಬಾಲ್ಯದಿಂದಲೂ ಇತ್ತು. ಅದು ಆ ಘಟ್ಟದಲ್ಲಿ—

ಕವಲೊಡೆಯಿತು. ಬಸವೇಶ್ವರರು ಯಜ್ಞೋಪವೀತವನ್ನು ಕಿತ್ತು ಕೂಡಲಸಂಗನ ಸಾನ್ನಿಧ್ಯವನ್ನು ತಲುಪಿ ಊರ್ಧ್ವಗಾಮಿಗಳಾದಂತೆ ತಮ್ಮ ಅಜ್ಜಿಯ ಹಾಸಿಗೆಯ ಬಳಿ ಕುಳಿತು ನಾಟಕ ಬರೆಯಲು ಉದ್ಯುಕ್ತರಾದರು. ಅವರ ಮೊದಲ ಕೃತಿಯಾದ "ವಿಶ್ವಜ್ಯೋತಿ ಬಸವೇಶ್ವರ" ಎಂಬ ನಾಟಕದ ನಾಂದಿ ಇಲ್ಲಿ ಆರಂಭಗೊಂಡಿತು.

" ಬಸವಲಿಂಗ ಬೇಡಿಕೊಂಬೆನು |
ಪಶುಪತಿ ವೃಷಭನೆ | (ಪ)
ಪಶುವಿಗೆ ಸಮಾನವೀ ಶಿಶು
ದೆಶೆಗೆಟ್ಟೋಡುತಿಹುದು ಭವದಿ |
ಅಸಮ ಮಹಿಮ ಪಿಡಿದು ಇದ ನಿನ್ನ |
ವಶದೊಳಿರಿಸಿ ಸಲಹು ಸಂತತ || "

ಎಂದು ದಿಕ್ಕುಗೆಟ್ಟು ತಮಗೆ ದಿಕ್ಕುತೋರಿಸೆಂದು ಪ್ರಾರ್ಥಿಸಿದರು. ಇವರ ಪ್ರಾರ್ಥನೆಗೆ ಶಿವನೇ ಪ್ರತ್ಯಕ್ಷವಾದಂತೆ ಶ್ರೀ ಶಿವಪ್ಪಸ್ವಾಮಿಗಳು ಇವರಿಗೆ ಅನುಗ್ರಹವಿತ್ತು, ತಮ್ಮ ಕರುಣೆಯ ಕಂದನನ್ನಾಗಿ ಮಾಡಿ ಕೊಂಡರು. ಭೂಲೋಕದಲ್ಲಿ ಹುಟ್ಟಿ ಭವನಾಶವಾಗಿ ಪಾವನಾತ್ಮರಾಗ ಬೇಕಾದರೆ ಸದ್ಗುರುವಿನ ಮಗನಾದರೆ ಸಾಧ್ಯ. ಪಾಪಕೂಪದಲ್ಲಿದ್ದರೂ ಒಮ್ಮೆಗೆ ಪುಣ್ಯಮಯನಾಗಬಹುದು ಶ್ರೀ ಗುರುವಿನ ಕೃಪಾಹಸ್ತ ಸೋಂಕಿದರೆ. ಬಸವಣ್ಣಸ್ವಾಮಿಗಳ ಆತ್ಮಜ್ಯೋತಿ ಪ್ರಖರವಾಯಿತು, ಅವರ ಪ್ರತಿಭೆ ಅರಳಿತು, ಅವರ ಹೊಸಜೀವನದ ಅರುಣೋದಯ ವಾಯಿತು ಗುರು ಕರಸಂಜಾತರಾದ ಮೇಲೆ.

ಕುಳಿತ ಸ್ಥಳದಲ್ಲೇ ತನ್ನ ಮೋಕ್ಷವರದನನ್ನು ಮನದುಂಬಿ ಹಾಡಲಾರಂಭಿಸಿದರು. ಅವರ ಹಾಡು ಭಕ್ತಿಯ ಆವೇಶದಿಂದ ತುಂಬಿದ ಭಾವಗೀತೆ—

" ಭಿಕ್ಷದಾರ್ಯರ ಕರ ಸಂಭವ | ಮಹಾನುಭಾವ
ರಕ್ಷಿಸೆನ್ನ ಗುರು ಶಿವಾಧವ .... .... ....
.... .... .... ....
ತನುವು ನಿಮ್ಮ ಸಾನ್ನಿಧ್ಯದಲಿ | ಮಣಿದು ಸೇವಿಸುತ್ತ ನಿಲ್ಲಲಿ |
ಮನವು ನಿಮ್ಮ ಮಹಘನದಲಿ | ಲೀನವಾಗಲಿ .... .... ....
.... .... .... ....
ಜೀವಾತ್ಮ ಬಸವ ನೀನೇ | ಕಾವುದೈ ಕೃಪಾಳು ನೀನೇ |
ದೇವನ ಪುರಿ ಪರಮನೆ | ಪಾವನಾತ್ಮನೇ || "

ಈ ಹೊಗಳಿಕೆ ಗುರುಗಳಿಗೆ ಹಿಡಿಸದು, ಬಾಹ್ಯದ ತೋರಿಕೆ ಅವರಿಗೆ ಸಲ್ಲದು. ತಮ್ಮ ಕಂದನನ್ನು ಕುರಿತು " ಲೋ ನೀನು ನನ್ನ ಬಗ್ಗೆ ಹೀಗಾಡ್ತಾನೆ ಅಂದಿದ್ರೆ ನಿನ್ನನ್ನು ನನ್ಗಂಡನ್ನಾಗಿ ಮಾಡ್ಕೊಳ್ತಿರಲಿಲ್ಲ " ಎಂದರಂತೆ. ಆದರೂ ಈ ಶಿಷ್ಯ ತಮ್ಮ ಪ್ರಾರ್ಥನೆಯನ್ನು ನಿಲ್ಲಿಸಲಿಲ್ಲ. ಅವರ ಭಕ್ತಿಯ ಒತ್ತಡವನ್ನು ಗುರುಗಳು ದಮನ ಮಾಡಲು ಸ್ಯಾಧವೂ ಆಗಲಿಲ್ಲ. ತಮ್ಮ ಶಿಷ್ಯನ ಭಕ್ತಿಗೆ ಒಳಗೊಳಗೇ ಹೆಮ್ಮೆ ಪಟ್ಟಿದ್ದರು, ಹಿರಿಹಿರಿ ಹಿಗ್ಗಿದ್ದರು.

ಭೋಗೈನಹುಂಡಿಯಲ್ಲಿ ಶ್ರೀಭಿಕ್ಷದವರಿಂದ ಸ್ಥಾಪಿತವಾಗಿದ್ದ ಭಿಕ್ಷದ ಮಠವನ್ನು ಶಿವಪ್ಪನವರು ಸುಂದರವಾಗಿ ಕಟ್ಟಿಸಿದರು. ಅಲ್ಲಿಗೆ

ತಮ್ಮ ಶಿಷ್ಯನನ್ನು ಭಿಕ್ಷದ ಕಾಯಕಕ್ಕೆ ನಿಯಮಿಸಿದರು (3-5-1946) ಬಾಗಿದ ತಲೆಯು ಮುಗಿದ ಕೈಯಾಗಿ ಕಂಥೆಭಿಕ್ಷದ ಕಾಯಕವನ್ನು ಹದಿ ಮೂರು ವರುಷಗಳ ಕಾಲ ದೃಢಮನೋಭಾವದಿಂದ ಮಾಡಿದರು. ಆಗಾಗ್ಗೆ ಗುರುಗಳು ಬಂದು ತಮ್ಮ ಕಂದನ ಸತ್ವಪರೀಕ್ಷೆ ಮಾಡಿ ಅವರನ್ನು ಪುಟ ಕ್ಕಿಟ್ಟ ಅಪರಂಜಿಯನ್ನಾಗಿ ಮಾಡುತ್ತಿದ್ದರು. ಒಮ್ಮೆ ಗುರುಗಳು ಶಿಷ್ಯ ನಲ್ಲಿ ಸಣ್ಣ ತಪ್ಪನ್ನು ಹುಡುಕಿ ಕೋಪದಿಂದ ಮಠಬಿಡಿಸಿ ಹೊರಗಟ್ಟಿದರು. ಮೌನವೇ ಆಭರಣವಾದಂತಿದ್ದ ಶ್ರೀಗಳು ಒಂದು ರಾತ್ರಿ, ಒಂದು ಹಗಲು ಗುರುಧ್ಯಾನ ನಿರತರಾಗಿ ಹಾಗೆಯೇ ಮಠದ ಹೊರಗೆ ನಿಂತಿದ್ದರು. ತಮ್ಮ ಗುರುವಿನ ಕೋಪಕ್ಕೆ ತುತ್ತಾಗಿ ವಿರೂಪರಾದ ಮೈಲಾರ ಬಸವ ಲಿಂಗ ಶರಣರು 'ಗುರುಕರುಣತ್ರಿವಿಧಿ' ಯನ್ನು ಬರೆದು ಗುರುವಿನ ಕೃಪೆಗೆ ಪಾತ್ರರಾದಂತೆ ಬಸವಣ್ಣಸ್ವಾಮಿಗಳು "ಎತ್ತಣ ಪಾಪವಿದೋ | ಗುರುವಿನ | ಹತ್ತಿರ ಸೇರ್ಗೊಡದು ||" .... .... .... ಎಂದು ಹಾಡಲುಪ ಕ್ರಮಿಸಿದರು. ಗುರುಗಳ ಕೋಪ ಶಮನವಾಗಿ ತಮ್ಮ ಶಿಷ್ಯನನ್ನು ಕರೆದು "ನಿನಗೆ ಈಗೆಲ್ಲಿ ಕಂಡೆ! ಮುಂದೆ ಭಾರಿ ನೊಗಬೀಳುತ್ತದೆ ಆಗೇನ್ಮಾ ಡ್ತೀಯೋ!" ಎಂದು ಎಚ್ಚರಿಸಿ ಅವರ ತಪ್ಪು ಒಪ್ಪುಗಳನ್ನು, ಓರೆಕೋರೆ ಗಳನ್ನು ತಿದ್ದಿ ಮುಂದಿನ ಮಹತ್ಸೇವೆಗೆ ತರಬೇತಿ ನೀಡುತ್ತಿದ್ದರು.

ಬೆಳೆ ಬೆಳೆಯುತ್ತಾ ಸೇವಾಮನೋಭಾವ ಹೆಚ್ಚು ವಿಶಾಲ ವಾಯಿತು. ಶಾಖಾ ಮಠದಲ್ಲಿ ಸೇವೆ ಮಾಡುತ್ತಿದ್ದಾಗಲೇ ಕೇಂದ್ರ ಮಠದ ಪ್ರಗತಿಯತ್ತ ಕಣ್ಣುಹಾಯಿಸಿ ತಾವು ಯಾವ ಕೆಲಸ ಮಾಡಿದರೂ ಅದು ಮಹಾಕೇಂದ್ರ ಮಠಕ್ಕೆ ಸಲ್ಲಬೇಕು. ಆ ಸೇವೆ ಇವರದಾಯಿತು. ಪ್ರತಿ ಯೊಂದು ಶಾಖಾಮಠದವರೂ ತಾವು ಕೇಂದ್ರದ ಸೊಡರನಿಂದ ತಮ್ಮ ಸೊಡರನ್ನು ಹಚ್ಚಿಕೊಂಡಿದ್ದೇವೆ ಎಂಬ ಅರಿವು ಬಸವಣ್ಣಮಹಾ ಸ್ವಾಮೀಜಿಯವರಿಗೆ ಬಂದಂತೆ ಬಂದರೆ ಆಗ ಆ ಶಾಖಾಮಠಗಳೆಲ್ಲಾ ಒಂದೊಂದು ದೇವನೂರು ಮಠವಾಗುವುದರಲ್ಲಿ ಸಂಶಯವಿಲ್ಲ.

ಭಿಕ್ಷದ ಕಾಯಕ, ಸಾಹಿತ್ಯಸೇವೆ, ಬಿಡುವಿನ ವೇಳೆಯಲ್ಲಿ ಭಕ್ತರಿಗೆ ಶಿವಯೋಗ ರಹಸ್ಯವನ್ನು ತಿಳಿಯಹೇಳುವುದು, ಅಷ್ಟಾವರಣ, ಷಟ್ ಸ್ಥಲ, ಪಂಚಾಚಾರಗಳನ್ನು ತಿಳಿಯಹೇಳಿ ಸರ್ವರನ್ನೂ ಭಕ್ತರನ್ನಾಗಿ ಮಾಡುತ್ತಾಬಂದರು. ಆವೇಶರಹಿತವಾದ ಅವರ ಮಾತು, ಕುಸುಮದಷ್ಟು ಮೃದುಮಧುರವಾದ ಅವರ ಮಾತು, ನಯವಿನಯಗಳಿಂದ ಬಾಗಿ ಬಳು ಕುವ ಅವರ ಮಾತಿಗೆ ಕಲ್ಲೂ ಕರಗಿ ನೀರಾಗುತ್ತಿತ್ತು. ಮೂರ್ಖರು, ಗರ್ವಿ ಗಳು, ಅವರ ಬಳಿ ಜ್ಞಾನಿಗಳಾಗುತ್ತಿದ್ದರು, ನಿಗರ್ವಿಗಳಾಗುತ್ತಿದ್ದರು, ಶಿವಭಾವರಾಗುತ್ತಿದ್ದರು.

“ಬೀಗಿ ಬೆಳೆದ ಗೊನೆವಾಳೆಯಂತೆ ಬಾಗಿಕೊಂಡಿದ್ದರೆ ಬೇಡಿದ ಪದ ವಿಯನೀವ ಕೂಡಲಸಂಗಮದೇವ” ಎಂಬಂತೆ ಶ್ರೀ ಗುರುಮಲ್ಲೇಶನು ಇವರ ಸೇವೆಯನ್ನು ಬಹು ಹತ್ತಿರದಲ್ಲಿಯೇ ಮಾಡಿಸಿಕೊಳ್ಳಲು ಬಯ ಸಿದನೇನೋ ಎಂಬಂತೆ ಇವರನ್ನು ಶ್ರೀ ಮಠಕ್ಕೆ ಕರೆಸಿಕೊಂಡನು. ಮೊದಲು ಕೆಲವು ತಿಂಗಳು (1959) ಭಿಕ್ಷದ ಕಾಯಕದಲ್ಲಿ ನಿರತರಾಗಿ ದ್ದರು. ಅನಂತರ ಶ್ರೀ ಗುರುಮಲ್ಲೇಶ್ವರರ ಗದ್ದುಗೆಯ ಪೂಜಾಸೇವೆಗೆ ನಿರತರಾದರು. ಕೆಲವು ವರುಷಗಳು ಈ ಸೇವೆಯಲ್ಲಿ ನಿರತರಾಗಿದ್ದ ಸಮಯ ದಲ್ಲಿ ಅಂದಿನ ಮಠಾಧೀಶರಾಗಿದ್ದ ಶ್ರೀ ಶಿವಬಸವ ಮಹಾಸ್ವಾಮಿಗಳು ಕಾರಣಾಂತರದಿಂದ ಪೀಠವನ್ನು ತೊರೆದು ಹೋದುದರಿಂದ ತೆರವಾದ ಪೀಠವನ್ನು ಏರಿ ಶ್ರೀಮಠದ ಗುರುತ್ವವನ್ನು ವಹಿಸಿಕೊಳ್ಳಬೇಕೆಂದು ಭಕ್ತರು ಪ್ರಾರ್ಥಿಸಿದರು. ಅಂತೆಯೇ ಶ್ರೀಮಠದ ಗುರುತ್ವಾಧಿಕಾರವನ್ನು ವಹಿಸಿಕೊಂಡು ಭಾರಿನೊಗಕ್ಕೆ ಹೆಗಲು ಕೊಟ್ಟರು.

“ಅಯ್ಯಾ ನಿಮ್ಮ ವಂಶಾವಳಿಯಳೊಬ್ಬ ತೊತ್ತಿನ ಮಗ ಹುಟ್ಟಿದ; ಆತನ ತೊತ್ತಿನ ಮಗ ನಾನಯ್ಯ! ಬಳಿದೊತ್ತು, ಬಳಗದೊತ್ತು, ವಂಶ ದೊತ್ತು ನಾನಯ್ಯ! ಕೂಡಲ ಸಂಗಮದೇವ ನಿಮ್ಮ ಒಡೆತನಕ್ಕೆ ಕೇಡಿಲ್ಲ ವಾಗಿ ನನ್ನ ತೊತ್ತುತನಕ್ಕೆ ಕೇಡಿಲ್ಲ” ಎಂಬ ಅಣ್ಣನವರ ವಾಣಿಯ

ಹಿರಿಮೆಯಂತೆ ಬಸವಣ್ಣಸ್ವಾಮಿಗಳು ಭಕ್ತಮಂಡಲಿಯ ಕರೆಗೆ ಒಪ್ಪಿದುದು ಮಠದ ಕರ್ತೃತ್ವವನ್ನಲ್ಲ ತೊತ್ತುತನವನ್ನು!

ಶ್ರೀಗಳು ಗುರುತ್ವವನ್ನು ವಹಿಸಿಕೊಂಡ ಕಾಲ ಒಂದು ಸಂದಿಗ್ಧ ಕಾಲ, ಅದೊಂದು ಸತ್ವಪರೀಕ್ಷೆಯ ಕಾಲ, ಶ್ರೀ ಮಠದ ಅಳಿವು ಉಳಿವಿನ ಕಾಲ, ಭಿಕ್ಷದಾರ್ಯ, ತೋಂಟದಾರ್ಯರಿಂದ ಪರಿಪೋಷಿತವಾಗಿದ್ದ ಶ್ರೀ ಮಠಕ್ಕೆ ರಾಹು ಬಡಿದಿದ್ದ ಕಾಲ. ದುಷ್ಟರು ಸ್ವಾರ್ಥಿಗಳು ಭೋಗ ಲೋಲುಪರು, ಶ್ರೀ ಮಠದ ಸಂಪತ್ತನ್ನು ಸೂರೆಗೊಂಡು ನುಗ್ಗು ನುಸಿ ಮಾಡಲು ಸಕಲ ಸನ್ನಾಹಗಳನ್ನು ಮಾಡಿಕೊಂಡಿದ್ದ ಕಾಲ. ಭಕ್ತರು ಭಯಗ್ರಸ್ತರಾಗಿ, ದಿಕ್ಕೆಟ್ಟು, ಕಂಗಾಲಾಗಿ ಇನ್ನು ದೇವನೂರು ಮಠಕ್ಕೆ ಉಳಿಗಾಲವಿಲ್ಲ, ದೇವನೂರು ಮಠಕ್ಕೆ ಅಧಿಪತಿಯಾಗುವ ಧೀಮಂತ ಶಕ್ತಿಯ ವ್ಯಕ್ತಿ ಇನ್ನು ಯಾರೂ ಇಲ್ಲ ಎಂದು ಹತಾಶರಾಗಿದ್ದ ಕಾಲ, ಇನ್ನು ಕೆಲವರು ಇದೇ ಸಮಯವೆಂದು ತಮ್ಮ ಅಪಪ್ರಚಾರದ ತಮ್ಮಟೆಯನ್ನು ಸ್ವಾರ್ಥಸಾಧನೆಯ ಬೆಂಕಿಯಲ್ಲಿ ಚೆನ್ನಾಗಿ ಕಾಯಿಸಿಕೊಂಡು ದೇವನೂರು ಮಠ, ಮಠವಲ್ಲ, ದೇವನೂರಿನ ಜನ ಮಠವನ್ನು ಉಳಿಯಗೊಡುವುದಿಲ್ಲ, ಜಂಗಮರಿಗೆ ಅಲ್ಲಿ ಉಳಿಗಾಲವಿಲ್ಲ, ದಾಸೋಹವೇ ಅಲ್ಲಿ ಇಲ್ಲವಾಗಿದೆ, ಸೇವೆಗೆಂದು ಭಕ್ತರು ಹೋದರೆ ಅವರಿಗೆ ಉಳಿಗಾಲವಿಲ್ಲ, ಮಠದ ಬಾಗಿಲು ಮುಚ್ಚಿದೆ, ಎಂದು ತಮಗೆ ಸಾಧ್ಯವಾದಷ್ಟು ರೀತಿಯಲ್ಲೆಲ್ಲಾ ಡಂಗೂರ ಹಾಕುತ್ತಿದ್ದ ಕಾಲ. ಇನ್ನು ಕೆಲವು ಜನ ಶಿಷ್ಯ ಭಕ್ತರು ಈ ಅನ್ಯಾಯ ಅಧರ್ಮಿಗಳನ್ನು ಸ್ವಾರ್ಥಪರರನ್ನು ನಿಗ್ರಹಿಸಿ ಶ್ರೀ ಮಠದ ಏಳಿಗೆಗೆ ಬದ್ಧಕಂಕಣನಾಗಿ ದುಡಿಯುವ ಮಹಾತ್ಮನು ಎಂದು ಬಂದಾನು ಎಂದು ಕನವರಿಸುತ್ತಾ ನಿರೀಕ್ಷಣೆಯಲ್ಲಿದ್ದ ಕಾಲ. ನಿಂತಿದ್ದ ಕೂತಿದ್ದ ಸಣ್ಣಪುಟ್ಟವರೆಲ್ಲಾ ಬೆಂದು ಹೋದ ಮನೆಯಲ್ಲಿ ಸುಟ್ಟು ಆರಿಬೆಂದ ಗಳುಗಳೇ ಲಾಭವೆಂದು ತಮಗೆ ಸಿಕ್ಕಿದ್ದನ್ನು ದೋಚಿಕೊಂಡು ನಾನೂ ಗುರುಮಲ್ಲೇಶ್ವರನ ಮಠದವನು, ನಾನೂ ಆ ಮಠದವನು ಎಂದು ಹೇಳಿ ಭಕ್ತರಿಂದ ಮೂಟೆಗಟ್ಟಲೆ ದವಸ ಧಾನ್ಯ, ಕೈತುಂಬ ಹಣ ಪಡೆದುಕೊಂಡು ಕೋರ್ಟು ಕಛೇರಿಗಳಿಗೆ, ವ್ಯಾಜ್ಯಕ್ಕೆ ಈ ಸಂಪತ್ತನ್ನು ಧಾರೆ

ಎರೆಯುತ್ತಿದ್ದ ಕಾಲ. ಹೀಗೆ ಮಠದ ಸಂಪತ್ತೆಲ್ಲಾ ಸಿಕ್ಕಿದವರಿಗೆ ವಶವಾಗಿ ಅಕ್ಷಯ ಭಂಡಾರದಂತಿದ್ದ ಉಗ್ರಾಣದಲ್ಲಿ ಇಂದಿಗೇನೋ ನಾಳಿಗೇನೋ ಎಂಬ ಭೀತಿ ಆವರಿಸಿ, ನಿಜಕ್ಕೂ ಈ ಮಠದ ದಾಸೋಹ ಧ್ವಜ ಬಾನೆತ್ತರದಲ್ಲಿ ಮತ್ತೆ ಹಾರಾಡಬಲ್ಲುದೆ? ಇನ್ನಿದು ಈ ಅನಂತಕೋಟಿ ಶತ್ರುಗಳ ಕುಹಕಿಗಳ ವಜ್ರಮುಷ್ಟಿಯಿಂದ ಪಾರಾದೀತೆ? ಎಂದಿದ್ದ ಆ ಕಾಲ, ಬ್ರಿಟಿಷರು ಭಾರತದ ಸಕಲೈಶ್ವರ್ಯವನ್ನು ಹೀರಿ ಚಿನ್ನದ ಹೊಗೆಯಾಡುತ್ತಿದ್ದ ಭಾರತದಲ್ಲಿ ಬಡತನದ ಬೆಂಕಿಯನ್ನು ಹಬ್ಬಿಸಿ ತಮ್ಮ ದೇಶಕ್ಕೆ ಹೋದ ಸಂದರ್ಭದಲ್ಲಿ ಹೇಗೆ ಭಾರತಮಾತೆ ದಿಕ್ಕುಗೆಟ್ಟು ಕಂಗೆಟ್ಟಿದ್ದಳೋ ಅದೇ ಸ್ಥಿತಿಯಲ್ಲಿ ಶ್ರೀ ಮಠದ ಸ್ಥಿತಿ ಇತ್ತು, ಇಂತಹ ಕ್ಲಿಷ್ಟ ಪರಂಪರೆಗಳ ಆಘಾತಕ್ಕೆ ಸಿಕ್ಕಿ ಶ್ರೀಮಠ ನುಚ್ಚುನೂರಾಗಿತ್ತು. ಈ ಸೀಗೆ ಮುಳ್ಳಿನ ಮಧ್ಯೆ ಬಾಳೆಯಗಿಡದಂತೆ ಬಾಗಿದ ತಲೆಯ ಮುಗಿದ ಕೈಯ ಬಸವಣ್ಣ ಸ್ವಾಮಿಗಳು ಶ್ರೀ ಗುರುಮಲ್ಲೇಶ್ವರರ ಮನೆಸು ತೊತ್ತಾದರು !

ಇದು ಸಾಧ್ಯವೆ? ಎಂತೆಂತಹ ಅಘಟಿತಘಟನಾ ವ್ಯಕ್ತಿಗಳಿಂದಲೇ ಈಸಲು ಸಾಧ್ಯವಾಗದ ಈ ಅಧಿಕಾರ ಈ ಮೂಗು ಬಸವನಿಂದ ಸಾಧ್ಯವೆ? ಎಂದು ಜನರು ಆಡಿದ್ದೂ ಉಂಟು. ಆದರೇನು ತನು ನಿನ್ನದು ಮನ ನಿನ್ನದೆಂದು ಶ್ರೀ ಗುರುವನ್ನು ನೆರೆನಂಬಿ ಗುರುವಿನ ಮೇಲೆ ಭಾರಹಾಕಿ ಅಧಿಕಾರ ಗದ್ದುಗೆ ಏರಿದರು. ತಾನೇ ತಾನಾಗಿ ಹಬ್ಬುತ್ತಿದ್ದ ಕಾಳ್ಗಿಚ್ಚನ್ನು ಮುಂಗಾರಿನ ಕುಡಿಮಿಂಚು ತಡೆದಂತೆ, ಮಾಂತ್ರಿಕನ ಬೇವಿನ ಸೊಪ್ಪಿನ ಮಂತ್ರಕ್ಕೆ ಕಾಳೋರಗನ ವಿಷದ ಹೆಡೆ ತಗ್ಗುವಂತೆ ಶ್ರೀಗಳ ಅಂತರಂಗ ಧೀಮಂತಶಕ್ತಿಯು ಈ ಎಲ್ಲಾ ಅನಿಷ್ಟ ಪರಂಪರೆಗಳನ್ನು ಮೆಟ್ಟಿ ನಿಂತಿತು, ಬಾಯಿ ಬಡುಕರು ಮೂಕರಾದರು, ಸ್ವಾರ್ಥಿಗಳು ನೆಲಸಮನಾದರು. ಬೂದಿ ಕಾಸಿನಿಂದ ಮನೆ ತುಂಬಿಸಿಕೊಂಡಿದ್ದವರ ಮನೆ ಬರಿಮನೆಯಾಯಿತು. ಒಂದು ಆರಾಧನೆಯೂ ನಡೆಯುವುದಿಲ್ಲ ಎನ್ನುತ್ತಿದ್ದವರ ಬಾಯಲ್ಲೇ ಆರಾಧನೆಗಳ, ಉತ್ಸವಗಳ, ಪಾದಪೂಜೆಗಳ ವೈಭವದ ಪ್ರಚಾರ ಭಾಷಣಗಳು ಪ್ರಾರಂಭವಾದುವು. ಗುರುಮಲ್ಲೇಶ್ವರರ ಗುರುಪರಂಪರೆಯವರು ಮುಟ್ಟಿದ ಕಲ್ಲು ಪರುಷವಾಗುತ್ತದೆ. ಮೆಟ್ಟಿದ ಧರೆ ಪಾವನ

ವಾಗುತ್ತದೆ, ಕಲ್ಲಿನ ಹರಳು ಮಾಣಿಕ್ಯವಾಗುತ್ತದೆ, ಬರಡು ಹಯನಾಗುತ್ತದೆ. ಮೂಕ ಮಾತುಗಾರನಾಗುತ್ತಾನೆ, ನಿರ್ಜೀವಿಗಳು ಜೀವಿಗಳಾಗುತ್ತವೆ. ಅಂತೆಯೇ ಬಸವಣ್ಣ ಮಹಾಸ್ವಾಮಿಗಳವರು ಅಧಿಕಾರ ವಹಿಸಿಕೊಂಡ ಕೆಲವೇ ವರ್ಷಗಳಲ್ಲಿ ಶ್ರೀ ಮಠದ ಗುಡಿ ಗೋಪುರದ ಕುಡಿ ಕವಲೊಡೆದು ಹಬ್ಬಲಾರಂಭಿಸಿತು.

ಅವರು ಮಹಾ ಯೋಜನೆಗಳನ್ನು ಹಾಕಿಕೊಂಡರು, ಕ್ರಮಬದ್ಧ ಕೆಲಸಕ್ಕೆ ಅಣಿ ಮಾಡಿಕೊಂಡರು, ಶ್ರೀ ಮಠದ ಉಗ್ರಾಣದ ಕೆಲಸಕ್ಕೆ, ಹಾಗೂ ಅದರ ವ್ಯವಸ್ಥೆ ನೋಡಿಕೊಳ್ಳಲು ಒಬ್ಬರು, ಕೆಬ್ಬೆಹೊಲ, ಆಡು, ತೋಟ, ಗದ್ದೆ ಇವುಗಳಿಗೆ ಪ್ರತ್ಯೇಕ ಪ್ರತ್ಯೇಕ ಒಬ್ಬೊಬ್ಬನನ್ನು ನಿಯಮಿಸಿದರು. ತಾವೇ ಸ್ವಂತ ನಿಂತು ಆಡುವಿನ ಕೆಲಸ ಆರಂಭಿಸಿದರು; ತಮ್ಮ ಗುರುಗಳು ಅರೆಮಾಡಿ ನಿಲ್ಲಿಸಿದ್ದ ಶ್ರೀಮಠದ ಕಟ್ಟಡದ ಕೆಲಸಕ್ಕೆ ಮತ್ತೆ ಜೀವ ಬಂತು. ಇದಕ್ಕೆ ಇಟ್ಟಿಗೆ ಸುಡಿಸಲು ಆರಂಭಿಸಿದರು. ಸುಣ್ಣದ ಗೂಡಿಗೆ ಮತ್ತೊಂದು ಕಡೆ ವ್ಯವಸ್ಥೆ ಮಾಡಿದರು, ಭಕ್ತರ ಬಳಗ ಶ್ರೀ ಗುರುವಿನ ಬಳಿಗೆ ಬಹಳವಾಗಿ ಬರಲಾರಂಭಿಸಿತು. ನಿಜವಾದ ಮಹಾತ್ಮನ ಬಳಿಗೆ ಸರ್ವವೂ ಆಹ್ವಾನವಿಲ್ಲದೆ ಬರುತ್ತದೆ, ಅಂತೆಯೇ, ಇಲ್ಲವೆಂದ ವಸ್ತು ಅದು ಹೇಗೋ ಬರುತ್ತಿತ್ತು. ಅನೇಕ ಜನರು ಇವರ ಕರಸಂಜಾತರಾದರು. ಜಾತಿ ಕುಲಗೋತ್ರಗಳಿಲ್ಲದೆ ಸರ್ವಸಮಾನಭಾವದಿಂದ ಇವರು ಎಲ್ಲರನ್ನೂ ತಮ್ಮ ಕೃಪೆಗೆ ಪಾತ್ರರನ್ನಾಗಿ ಮಾಡಿಕೊಂಡರು. ಯಾರು ಶತ್ರುಗಳಾಗಿದ್ದರೋ ಯಾರು ಮಠವನ್ನು ನಿಂದಿಸಿ ಜರೆದಿದ್ದರೋ ಅವರೇ ಶ್ರೀಗಳನ್ನು ತಮ್ಮ ಊರಿಗೆ ಬನ್ನಿ ತಮ್ಮ ಮನೆಗೆ ಬನ್ನಿ ನಮ್ಮ ಸ್ಥಳಕ್ಕೆ ಭಿಕ್ಷಕ್ಕೆ ಬನ್ನಿ ಎಂದು ಆಹ್ವಾನ ನೀಡಲು ಆರಂಭಿಸಿದರು. ಅವರ ಪಾದ ಪೂಜೆಗೆ ಇತಿ ಮಿತಿಯೇ ಇಲ್ಲವಾಯಿತು.

ಶ್ರೀಗಳವರ ಬೆನ್ನ ಹಿಂದೆ ನಿಂತು ಅವರ ಭಿಕ್ಷದ ಕೆಲಸಕ್ಕೆ ನೆರವಾಗಿ ಅವರ ಆಪ್ತರಾಗಿ ತನ್ಮೂಲಕ ಶ್ರೀ ಮಠದ ಸೇವೆಯನ್ನು ನಿಷ್ಠೆಯಿಂದ ಮಾಡಿದವರೆಂದರೆ ಲಿಂ|| ದ್ವಂದಪ್ಪ ಮಹಾಸ್ವಾಮಿಗಳವರು ಮತ್ತು

ಇಂದಿಗೂ ಬಸವಣ್ಣಸ್ವಾಮಿಗಳ ಕಾಲದಲ್ಲಿ ಮಾಡಿದ ಸೇವೆಗಿಂತಲೂ ಹಿರಿ ದಾಗಿ ಮಾಡುತ್ತಿರುವ ಕಟ್ಟಣವಾಡಿ ಭಿಕ್ಷದ ಮಠದ ಭಿಕ್ಷದ ರಾಚಪ್ಪ ಸ್ವಾಮಿಗಳು. ಇಂತಹ ಒಡನಾಡಿಗಳ ಸಹಾಯದಿಂದ ಪೂಜ್ಯರು ಶ್ರೀ ಮಠದ ಸರ್ವರೀತಿಯ ಪುರೋಭಿವೃದ್ಧಿಗೆ ಟೊಂಕಕಟ್ಟಿ ನಿಂತರು.

ಬಸವಣ್ಣಮಹಾಸ್ವಾಮಿಗಳು ತಮ್ಮ ಹತ್ತುವರ್ಷದ ಅಧಿಕಾರಾವಧಿ ಯಲ್ಲಿ ನೂರಾರುವರ್ಷಗಳಲ್ಲಿ ಅನೇಕರು ಮಾಡಬಹುದಾದ ಕೆಲಸಗಳನ್ನು ಸದ್ದುಗದ್ದಲವಿಲ್ಲದೆ ಮಾಡಿದರು. ಭಕ್ತರಲ್ಲಿ ನಂಬಿಕೆಯು ಮೊಳಕೆ ಚಿಗು ರಿತು, ಅವರ ಭಕ್ತಿಯ ಬಳ್ಳಿ ಬೆಳೆಯಿತು. ತಮ್ಮ ಭಕ್ತಿಯ ಸೇವೆ ಶ್ರೀ ಮಠದಲ್ಲಿ ಸದುಪಯೋಗವಾಗುತ್ತದೆ ಎಂಬ ನಂಬುಗೆ ಬಂತು, ಅಲ್ಲದೆ ಶ್ರೀಗಳವರ ಕೃಪೆಯಿಂದ, ಆಶೀರ್ವಾದದಿಂದ ಅವರ ನೂರೆಂಟು ಆಸೆ ಫಲಿಸುತ್ತವೆ ಎಂಬುದನ್ನು ಮನಗಂಡರು. ಮಠದ ಸೇವೆಗೆ ಭಕ್ತರು, ಹಲವು ಕಡೆಯಿಂದ ಬರಲಾರಂಭಿಸಿದರು. ಭಕ್ತರಲ್ಲದವರು ಭಕ್ತರಾದರು, ಭಿಕ್ಷೆ ಕೊಡದವರು ಮೂಟೆಗಟ್ಟಲೆ ಕೊಟ್ಟರು. ಮಠದ ಸಂಪತ್ತು ಅಕ್ಷಯ ವಾಗುತ್ತಾ ಬಂತು.

ಶ್ರೀಗಳವರು ತಮ್ಮ ಕರ್ತವ್ಯವನ್ನು ವಿಶಾಲಗೊಳಿಸಿದರು. ಒಂದು ವಿದ್ಯಾರ್ಥಿ ನಿಲಯವನ್ನು ಮೈಸೂರಿನಲ್ಲಿ ಸ್ಥಾಪಿಸಿ ಕಾಲೇಜು ವಿದ್ಯಾರ್ಥಿ ಗಳಿಗೆ ನೆರವು ನೀಡಬೇಕೆಂದು ಮೊದಲು ಯೋಚಿಸಿದರು. ಇದರ ಬಗ್ಗೆ ಅನೇಕಬಾರಿ ಪ್ರಸ್ತಾಪ ಮಾಡಿದರು, ಅಂತೆಯೇ ದೇವನೂರಿನಲ್ಲಿರುವ ವಿದ್ಯಾರ್ಥಿನಿಲಯದ ಪ್ರತ್ಯೇಕ ಕಟ್ಟಡದ ವ್ಯವಸ್ಥೆಗೆ ಆಸ್ಥೆ ವಹಿಸಿದರು. ಒಂದು ಪಿ. ಯು. ಸಿ. ಕಾಲೇಜನ್ನು ಆರಂಭಿಸಬೇಕೆಂದು ವ್ಯವಹಾರ ನಡೆ ಸಲು ಸಲಹೆಯಿತ್ತರು. ಆಧುನೀಕರಣ ಮಾಡಿ, ಕಸವನ್ನು ಗುಡಿಸಿ ಪರಿಶುದ್ಧಗೊಳಿಸುವುದೇ ಅವರ ನಿಜ ಧ್ಯೇಯವಾಗಿತ್ತು.

ಅವರು ಶ್ರೀ ಮಠದ ಏಳಿಗೆಗೆ ಅದೆಷ್ಟು ದೂರ ಯೋಚನೆ ಮಾಡಿದ್ದರೆಂದರೆ ಊಹಿಸಲು ಅಸಾಧ್ಯವಾಗಿದೆ. ಮುಂದಿನ ದೃಷ್ಟಿಯಿಂದ ಅವರು ಹಲವು ಮಂದಿ ಶಿಷ್ಯರಿಗೆ ತರಬೇತಿ ಕೊಟ್ಟರು. ಅವರು ಸಾಕಿದ ಇಬ್ಬರು ಮಹಾನ್ ಶಿಷ್ಯರಲ್ಲಿ ಇಂದು ತಮ್ಮ ಗುರುವಿನ ಆಶೆ ಆಶೋತ್ತರಗಳನ್ನು ಈಡೇರಿಸಿಕೊಂಡು ಹೋಗುತ್ತಿರುವ, ನಮ್ಮೆಲ್ಲರ ಆಶಾಜ್ಯೋತಿಯಾದ ದಾಸೋಹಮೂರ್ತಿ ಸದ್ಗುರು ಶ್ರೀ ಶ್ರೀ ಮಹಾಂತಸ್ವಾಮಿಗಳವರು ಬಸವಣ್ಣಸ್ವಾಮೀಜಿಯವರ ಆಶೆಯ ಕುಡಿಯಾಗಿ ಕೊನರಿದವರು. ಅವರ ಸೇವೆಯ ಪ್ರತಿಫಲವೇ ಇಂದು ಶ್ರೀ ಮಹಾಂತಸ್ವಾಮಿಯವರಾಗಿ ನಮಗೆ ಗೋಚರವಾಗುತ್ತಿದೆ.

ಇಂತಹ ಪವಿತ್ರಾತ್ಮರು ತಮ್ಮ ಶರೀರದ ಯೋಗಕ್ಷೇಮವನ್ನೂ ಚಿಂತಿಸದೆ ಈ ಮಹಾರಥದ ನೊಗಕ್ಕೆ ತಮ್ಮ ಹೆಗಲನ್ನು ಕೊಟ್ಟು ಮುನ್ನಡೆಸಿದರು. ಆದರೆ "ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು ಕಳಚಿ ಬೀಳುವಲ್ಲಿ ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ" ದಿನಾಂಕ 2-4-1970 ರಂದು ಗುರುವಾರ ಶ್ರೀಗಳು ಗುರುಮಲ್ಲೇಶ್ವರಾಂಘ್ರಿಯನ್ನು ಸಾಧಿಸಿದರು.

ಭಕ್ತಾದಿಗಳು, ಹರಗುರು ಚರಮೂರ್ತಿಗಳು ನೂರಾರು ಮೈಲಿ ದೂರದಿಂದ ತಮ್ಮ ಗುರುವಿನ ದರ್ಶನ ಪಡೆಯಲು ಗುಂಪು ಗುಂಪಾಗಿ ಬಂದರು. ಅವರ ಪಾರ್ಥಿವ ಶರೀರದ ಸಮ್ಮುಖದಲ್ಲಿ ಅಂದರೆ 3-4-70 ರಂದು ಶುಕ್ರವಾರ ಭಕ್ತರೆಲ್ಲರ ಅಭಿಮತದಂತೆ ಅವರ ಕರಕಮಲ ಸಂಜಾತರಾದ ಶ್ರೀ ಶ್ರೀ ಮಹಾಂತಸ್ವಾಮಿಗಳವರನ್ನು ಶ್ರೀ ಮಠಾಧ್ಯಕ್ಷರನ್ನಾಗಿ ಮಾಡಲಾಯಿತು. ತಮ್ಮ ಗುರುವಿನ ಉತ್ತರಕ್ರಿಯಾದಿಗಳನ್ನು ಉತ್ತಮೋತ್ತಮವಾಗಿ ನೆರವೇರಿಸಿದರು. ಅವರ ಹನ್ನೆರಡನೇ ದಿನದ ಶಿವಗಣಾರಾಧನಾ ಮಹೋತ್ಸವವಂತೂ ಇತ್ತೀಚಿನ ನಮ್ಮಗಳಿಗೆ ಬಹಳ ಆಶ್ಚರ್ಯಕರವೆಂಬ ರೀತಿಯಲ್ಲಿ, ವೈಭವಯುತವಾಗಿ ನಡೆಯಿತು. ನಾವಾರೂ ಈವರೆವಿಗೂ ಅಷ್ಟು ಜನರನ್ನೂ, ಅಂತಹ ಹೂವಿನ ಚಪ್ಪರ



ಶ್ರೀ ತೋಂಟದಾರ್ಯಸ್ವಾಮಿಗಳ ಗದ್ದಿಗೆ



ಶ್ರೀ ಶಿವಪ್ಪನವರ ಗದ್ದಿಗೆ

ವನ್ನೂ, ಆ ಹರಗುರು ಚರಮೂರ್ತಿಗಳ ಮಹಾಸಭೆಯನ್ನೂ, ಆ ಮಹಾ ದಾಸೋಹವನ್ನೂ ನೋಡಿರಲಿಲ್ಲ. ಅದೊಂದು ಅದ್ಭುತ ಪವಾಡ ವೆಂಬಂತೆ ಕನಕಪುರದ ದೇಗುಲಮಠಾಧೀಶರಾಗಿದ್ದ ಶ್ರೀ ನಿರ್ವಾಣ ಮಹಾ ಸ್ವಾಮಿಗಳವರ ಪುಷ್ಪಾಂಥೋಳಿಕೋತ್ಸವವೂ ; ಸಿದ್ಧಗಂಗಾ ಶ್ರೀ ಮಠಾ ಧೀಶರಾದ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಧಾರ್ಮಿಕಸಭೆಯೂ ನಡೆಯಿತು. ಅಂದಿನ ಆ ಸಭೆಯ ವೈಭವವನ್ನು ನೋಡಿದ ಕೆಲವರು ಅದೊಂದು ಅನುಭವ ಮಂಟಪದಂತಿತ್ತು ಎಂಬ ಮಾತನ್ನು ನಾವು ಕೇಳಿದೆವು. ನಮ್ಮ ವಯಸ್ಸಿನಲ್ಲಿ ನಾವು ಕಂಡ ಅಭೂತಪೂರ್ವವಾದ ಮಹೋತ್ಸವ ಈ ಮಹನೀಯರದು. ಅವರ ಈದನಂತರ ನಡೆದ, ನಡೆಯುತ್ತಿರುವ ಕೆಲಸಕಾರ್ಯಗಳಂತೂ ಪವಾಡವೇ ಸರಿ. ಶ್ರೀ ಬಸವಣ್ಣಮಹಾಸ್ವಾಮಿಗಳವರ ಆದರ್ಶವೇ ನಮಗೆ ದಾರಿ ದೀಪವಾಗಲಿ, ಅವರ ಶಾಂತಿಪ್ರಭೆ ನಮಗೆ ತಂಪನ್ನೀಯಲಿ, ಅವರ ನೆನಹೇ ನಮಗೆ ರಕ್ಷೆಯಾಗಲಿ, ಅವರ ಚಿರಸ್ಮರಣೆಯೇ ನಮಗೆ ಅಮೃತ ಸೇಚನೆಯನ್ನೀಯಲಿ, "ಬಸವ" ನೆಂಬ ನಾಮವೇ ನಮಗೆ ಘನ ಮುಕ್ತಿಯನ್ನೀಯಲಿ.



## ಅಧ್ಯಾಯ ೧೪

"ಬಟ್ಟ ಬಯಲೆಲ್ಲ ಗಟ್ಟಿಗೊಂಡೊಡೆ ಸ್ವರ್ಗ ಮರ್ತ್ಯ
ಪಾತಾಳಕ್ಕೆ ಠಾವಿನ್ನೆಲ್ಲಿಯದೊ?
ಮೇಘ ಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗಳಿಗೆ ಉದಕ
ವಿನ್ನೆಲ್ಲಿಯದೊ?
ಕಷ್ಟಜೀವಿ ಮನಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದೊಡೆ
ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಯದೊ?
ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಾವಿರಕ್ಕೊಬ್ಬ ಸತ್ಯ,
ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ!"

ಈ ಶರಣ ವಾಣಿಯಂತೆ ಭವ ರಾಟಾಳದಲ್ಲಿ ಜನ್ಮವೆತ್ತಿದ ಮಾನವ ಪ್ರಾಣಿಗಳೆಲ್ಲಾ ಮಹಾತ್ಮರಾಗುವುದಿಲ್ಲ, ಶರಣತ್ವಕ್ಕೆ ಏರುವುದಿಲ್ಲ. ಏರಲು ಸಾಧ್ಯವೂ ಇಲ್ಲ. ಇಂತಹ ಶರಣರು ಅವತಾರವಾಗುವಾಗ ನಾನು ಶರಣ, ಮಹಾತ್ಮ, ಎಂದು ಸಾರಿಕೊಂಡು ಅವತಾರವೆತ್ತುವುದಿಲ್ಲ. ನೇರವಾಗಿ ಬಾನಿನಿಂದ ಭೂಮಿಗೆ ಇಳಿಯುವುದಿಲ್ಲ. ಇಂತಹ ಕಾಲದಲ್ಲಿ ಇಂಥ ದೇಸ್ಥಳದಲ್ಲಿ ಬರುತ್ತಾರೆ ಎನ್ನಲೂ ಆಗದು. ಶರಣರು ನಮ್ಮ ಮಧ್ಯೆಯೇ ಇರುತ್ತಾರೆ, ನಮ್ಮ ಪರಿಸರದಲ್ಲಿಯೇ ವಾಸಿಸುತ್ತಾರೆ, ಆದರೂ ಅವರ ಮಾತುಕತೆ, ನಡೆನುಡಿ, ವರ್ತನೆ, ವ್ಯವಹರಿಸುವಿಕೆಗಳು ಇತರರಿಗಿಂತ ಭಿನ್ನವಾಗಿ, ಇಹದಲ್ಲಿಯೇ ಇದ್ದು, ಸಾಧಿಸಿ ಅಮರತ್ವವನ್ನು ಪಡೆಯುತ್ತಾರೆ. ಶರಣರ ಇರವು ನಮ್ಮ ಅಜ್ಞಾನಮಯವಾದ ಚಕ್ಷುಗಳಿಗೆ ಗೋಚರವಾಗುವುದಿಲ್ಲ. ಅವರ ಅಂತರಂಗಜ್ಯೋತಿಯ ಪ್ರಭೆಯು ತಿಲದ ಮರೆಯ ತೈಲದಂತೆ, ನೆಲದ ಮರೆಯ ನಿಧಾನದಂತೆ, ಪುಷ್ಪದೊಳಗಣ ಪರಿಮ



ಶ್ರೀ ಬಸವಣ್ಣಸ್ವಾಮಿಗಳ ಕರಸಂಜಾತರಾದ

ಶ್ರೀ ಮಹಂತಸ್ವಾಮಿಗಳು

ದಂತೆ, ಮರಳೊಳಗಣ ಮಾಣಿಕ್ಯದಂತೆ ಸುಪ್ತವಾಗಿರುತ್ತದೆ. ಇಂತ ಹವರು ದುಷ್ಟನಿಗ್ರಹಕ್ಕೆ, ಶಿಷ್ಟಪರಿಪಾಲನೆಗೆ ಯುಗಯುಗದಲ್ಲಿಯೂ ಸಂಭವಿಸಿ ಮಾನವನ ಅಜ್ಞಾನದ ಪೊರೆಯನ್ನು ಜ್ಞಾನಶಸ್ತ್ರದಿಂದ ಕತ್ತ ರಿಸಿ ನಮ್ಮನಮ್ಮಲ್ಲಿರುವ ಅಂತರಾತ್ಮನ ಸಂದರ್ಶನ ಮಾಡಿಸಿ ಭೃಂಗ ಮುಟ್ಟಿದ ಕೀಟದಂತೆ ಇಹವನ್ನು ಪರವನ್ನಾಗಿ, ಅಜ್ಞಾನಿಗಳನ್ನು ಜ್ಞಾನಿ ಗಳನ್ನಾಗಿ, ಪಾಪಾತ್ಮರನ್ನು ಶುದ್ಧಾತ್ಮರನ್ನಾಗಿ ಮಾಡುವರು. ಶ್ರೀ ಗುರು ಮಲ್ಲೇಶ್ವರರ ಕರಸ್ಪರ್ಶವಾದ ಶಿಷ್ಯರ ಶಿಷ್ಯರೆಲ್ಲಾ ಇಂಥ ಮಹಿಮಾ ಪುರುಷರು. ಗೋಪ್ಯವಾಗಿದ್ದು ಕ್ರಾಂತಿಕಾರೀ ಬದಲಾವಣೆಗಳನ್ನು ಕಣ್ಸನ್ನೆ ಯಲ್ಲಿ ಮಾಡಿ ಸಮಾಜ ಸುಧಾರಣೆ ಮಾಡಿದ ಆದರ್ಶ ಸುಧಾರಕರು. ಅವರ ಆಚರಣೆ, ಹಿಡಿದ ದಾಸೋಹ ಕಾಯಕ, ತುಳಿದ ಶರಣಪಥ, ಬೋಧಿಸಿದ ಶಿವತತ್ವಗಳಿಂದ ಅವರು ದೇವತ್ವಕ್ಕೇರಿ ಶರಣರ ತಾರಾಗಣದಲ್ಲಿ ಧ್ರುವ ತಾರೆಯಾಗಿ ಮೆರೆದಿದ್ದಾರೆ.

ಶ್ರೀ ಬಸವಣ್ಣಸ್ವಾಮಿಗಳು ಸದಾ ಅಂತರ್ಮುಖಿಗಳು, ಅನುಭಾವಿಗಳು, ಮೌನವೇ ಭೂಷಣವಾಂತು ಬಂದಿದ್ದ ಒಳನೋಟದವರು. ಅವರ ಅಂತ ರಂಗ ದರ್ಶನದಲ್ಲಿ ತ್ರಿಕಾಲದಲ್ಲಾಗುವ ಆಗುಹೋಗುಗಳ ಚಿತ್ರ ಸುಳಿ ಯುತ್ತಿತ್ತು. ಬಹುಶಃ ಅವರಿಗೆ ಭವಿಷ್ಯತ್ತಿನ ಬಗ್ಗೆ ಆಳವಾದ ಅರಿವು, ಚಿಂತನ ಮಂಥನ ಮಾಡುವ ಶಕ್ತಿ ಗುಪ್ತವಾಗಿ ಇತ್ತು. ಅಂತು ಏನೋ ಅವರು ಸಾಕಿಸಲಹಿದ ಕರುಣೆಯ ಕಂದಮ್ಮಗಳಲ್ಲಿ ಅಗ್ಗಳೆಯರಾಗಿ, ಶರಣ ಸಾರ್ವಭೌಮರಾಗಿ ಅವರ ನಂತರ ಶ್ರೀ ಮಠದ ಗುರುಸಾರ್ವಭೌಮ್ಯಾಧಿ ಕಾರವನ್ನು ಪೂಜ್ಯರಾದ ಸದ್ಗುರು ಶ್ರೀ ಶ್ರೀ ಮಹಾಂತಸ್ವಾಮಿಗಳವರು ದಿನಾಂಕ 3-4-1970 ರಂದು ಶುಕ್ರವಾರ ತಮ್ಮ ಗುರುಗಳ ದಿವ್ಯ ಲಿಂಗ ಮಯ ಶರೀರದ ಮುಂದೆ ವಿಧ್ಯುಕ್ತವಾಗಿ ವಹಿಸಿಕೊಂಡರು.

ಶರಣರ ಮನೆಯ ಕಸಗುಡಿಸದ ಯಾರಿಗೂ ಈ ಪವಿತ್ರವಾದ ಪದವಿ ದೊರಕುವುದಿಲ್ಲ. ನಿಷ್ಕಪಟತ್ವದಿಂದ, ತ್ರಿಕರಣ ಪೂರ್ವಕವಾಗಿ ಬಾಲ್ಯ ದಿಂದಲೂ ಶ್ರೀ ಮಠದ ಸೇವೆ ಮಾಡಿದವರು ಶ್ರೀ ಮಹಂತಸ್ವಾಮಿ

ಗಳವರು. ಸುಸಂಸ್ಕೃತರೂ, ಪಂಡಿತರೂ, ಅಲ್ಪಸ್ವಲ್ಪ ಸಂಸ್ಕೃತ ಜ್ಞಾನವುಳ್ಳವರೂ, ವೀರಶೈವ ತತ್ವಾಸಕ್ತರೂ ಆಗಿಲಾಗಿ ಶ್ರೀ ಗುರುಮಲ್ಲೇಶ್ವರರಲ್ಲಿ ಅವಿನಾಭಾವ ಭಕ್ತಿಯುಳ್ಳ ಇವರ ಪಿತರು ಮೂಲತಃ ಟಿ. ನರಸೀಪುರದ ಬಳಿಯ ಹಿರಿಯೂರಿನವರು; ಸಧ್ಯದಲ್ಲಿ ನಂಜನಗೂಡಿನ ಸಮೀಪದ ಕುಪ್ಪರವಳ್ಳಿಯಲ್ಲಿ ಬಂದು ನೆಲಸಿದರು. ಹುಟ್ಟಿನಲ್ಲಿಯೇ ಮೌನಿಗಳೂ, ಶಿವಭಾವವುಳ್ಳವರೂ ಆದ ತಮ್ಮ ಪುತ್ರನನ್ನು ಇವನು ನನ್ನ ಪುತ್ರನಲ್ಲ ಶ್ರೀ ಗುರುಸ್ವಾಮಿಯ ಮಗನೆಂದು ತಿಳಿದು ಬಹು ಚಿಕ್ಕವಯಸ್ಸಿನಲ್ಲೇ ಶ್ರೀ ಮಠಕ್ಕೆ ಸೇರಿಸಿಬಿಟ್ಟರು. ಲಿಂ|| ಶ್ರೀ ದ್ವಂದಪ್ಪಮಹಾಸ್ವಾಮಿಗಳವರು ಇವರಿಗೆ ಜಂಗಮದೀಕ್ಷೆಯನ್ನಿತ್ತು ಲಿಂಗಾಂಗಸಾಮರಸ್ಯದ ತಿಳಿಬೋಧೆಯನ್ನು ಆಗಲೇ ಅವರಿಗೆ ತಿಳಿಯಹೇಳಿದರು. ಇಲ್ಲಿನ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಾ ಬಿಡುವಿನ ವೇಳೆಯನ್ನೆಲ್ಲಾ ಶ್ರೀ ಗುರುಮಠದ ಸೇವೆಯಲ್ಲಿ ನನೆಸುತ್ತಾ ಬಂದರು. ಶ್ರೀ ಗದ್ದಿಗೆಗಳ ರಜ ಹೊಡೆಯುವುದು, ಹೂ ಪತ್ರೆಗಳನ್ನು ತರುವುದು, ಹರಗುರು ಚರಮೂರ್ತಿಗಳ ಬಳಿ ಶಿವತತ್ವ ಬೋಧಾಮೃತ ಪಾನ ಮಾಡುವುದು, ಶ್ರೀ ಮಠದ ಗುರುಪರಂಪರೆಯ ಪರಿಚಯ ಮಾಡಿಕೊಳ್ಳುವುದು ಇತ್ಯಾದಿ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ಕ್ರಮೇಣ ಅವರು ಕಂಥೆಭಿಕ್ಷದ ಕಾಯಕವನ್ನು ವಹಿಸಿಕೊಂಡರು. ಅವರು ಕಂಥೆಭಿಕ್ಷ ಮಾಡಿ ತಂದ ಪ್ರಸಾದವನ್ನು ಹರಗುರುಚರಮೂರ್ತಿಗಳಿಗೆ ನೀಡುವಾಗ ಅವರು ನೀಡುತ್ತಿದ್ದ ಮುಷ್ಟಿ ಅನ್ನ ಸಾಮಾನ್ಯರಿಗೆ ಸಾಕುಸಾಕಾಗಿ ಹೋಗುತ್ತಿತ್ತು ಅಂತಹ ಧಾತಾರ! ಅಂತಹ ದಾಸೋಹ ಹಸ್ತ!

ಅನಂತರ ಶ್ರೀ ಮಠದಲ್ಲಿ ಹಲವು ಬದಲಾವಣೆಗಳಾದುವು, ಅಂದಿನ ಗುರುಗಳಾಗಿದ್ದ ಶ್ರೀ ಶಿವಬಸವಸ್ವಾಮಿಗಳಿಂದ ತೆರವಾದ ಅಧಿಕಾರವನ್ನು ಶ್ರೀ ಬಸವಣ್ಣಮಹಾಸ್ವಾಮಿಗಳವರು ವಹಿಸಿಕೊಂಡರು. ಅವರ ವರ ಕರಸಂಜಾತರಾಗಿ, ಅವರಿಂದ ಅನುಗ್ರಹೀತರಾಗಿ, ಅವರ ಕೃಪಾಶೀರ್ವಾದದಿಂದ ಶ್ರೀಗಳು ತಮ್ಮ ಘನಮನದ ಅಂತರಂಗದ ಧೀಮಂತಶಕ್ತಿಯನ್ನು ಹೆಚ್ಚಿಸಿಕೊಂಡರು. ಶ್ರೀ ಮಠವು ಆಗ ಸಂದಿಗ್ಧಕಾಲದಲ್ಲಿದ್ದು ಬಸವಣ್ಣ

ಸ್ವಾಮಿಗಳವರಿಗೆ ಅದೊಂದು ಪರೀಕ್ಷಾ ಕಾಲವಾಗಿತ್ತು. ಆ ಇಕ್ಕಟ್ಟಿನ ಸಮಯದಲ್ಲಿ ಇವರು ಮತ್ತು ಇವರ ಆತ್ಮೀಯ ಒಡನಾಡಿಗಳಾದ, ಇಂದು ಸೋಮಹಳ್ಳಿ ಶಿಲಾಮಠಾಧೀಶರಾದ ಶ್ರೀ ಸಿದ್ಧಮಲ್ಲಿಕಾರ್ಜುನಸ್ವಾಮಿಗಳು ಮಠದ ಪ್ರಮುಖ ಸೇವೆಯಲ್ಲಿ ನಿರತರಾಗಿ ಗುರುಗಳು ಮಠದಲ್ಲಿಲ್ಲದ ವೇಳೆಯಲ್ಲಿ ಮಠದ ಸರ್ವ ಜವಾಬ್ದಾರೀ ಕೆಲಸಗಳನ್ನೂ ನಿರ್ವಹಿಸಿ ಗುರುಗಳ ಸಾಹಸ ಕಾರ್ಯದಲ್ಲಿ ಸಮಭಾಗಿಗಳಾಗಿ ಹೆಗಲಿಗೆ ಹೆಗಲು ಕೊಟ್ಟರು.

ತದನಂತರ ಶ್ರೀಗಳು ಕಂಥೇಭಿಕ್ಷದ ಕಾಯಕದಿಂದ ಶ್ರೀ ಗದ್ದಿಗೆಗಳ ಪೂಜಾ ಕಾಯಕಕ್ಕೆ ಪ್ರವೇಶ ಮಾಡಿದರು, ಭಿಕ್ಷದ ಕಾಯಕವನ್ನು ತಮ್ಮ ಒಡನಾಡಿಗಳಿಗೆ ವಹಿಸಿದರು. ಈ ಈರ್ವರು ಮಹನೀಯರೂ ತಮ್ಮ ಚಿಕ್ಕವಯಸ್ಸಿನಲ್ಲಿ ಈ ಮಹತ್ತರ ಸೇವೆಯಲ್ಲಿ ನಿರತರಾಗಿ ನಿರುಪಾಧಿಕತೆಯಿಂದ ನಿರ್ವಹಿಸಿ ಮಠದ ಕೀರ್ತಿಪತಾಕೆಯನ್ನು ಎತ್ತಿ ಮೆರೆಸಿದರು. ಗುರುವಿಗೆ ತಕ್ಕ ಶಿಷ್ಯರು. ಇದನ್ನರಿತೇ ಏನೋ ಬಸವಣ್ಣಸ್ವಾಮಿಗಳು ಇವರನ್ನು ಜೋಪಾನವಾಗಿ, ಶಿಷ್ಟವಾದ ತರಬೇತಿಯಲ್ಲಿ ಬೆಳಸಿದರು. ಒಬ್ಬೊಬ್ಬರೂ ಒಂದೊಂದು ಮಹಾ ಸಂಸ್ಥೆಯ ಕೆಲಸಕಾರ್ಯಗಳನ್ನೂ ನಿರ್ವಹಿಸಬಲ್ಲ ವಜ್ರಶಕ್ತಿಯನ್ನಿತ್ತರು.

ಲಿಂಗಮಯರಾದ ಬಸವಣ್ಣಸ್ವಾಮೀಜಿಯವರ ಸ್ಥಾನವನ್ನು ದಿನಾಂಕ 3–4–1970 ರಂದು ಶುಕ್ರವಾರ ಭಕ್ತಾದಿಗಳ ಇಷ್ಟದಂತೆ ಅಲಂಕರಿಸಿ ಶ್ರೀ ಮಠಾಧೀಶರಾದರು.

ಅತಿ ವೈಭವದಿಂದ ತಮ್ಮ ಗುರುಗಳ ಆರಾಧನಾ ಮಹೋತ್ಸವವನ್ನು ನೆರವೇರಿಸಿದರು. 1919 ನೇ ಇಸವಿಯಲ್ಲಿ ನಡೆದ ಕುಲಶದ ಆರಾಧನೆ ಮತ್ತು ಭಿಕ್ಷದವರ ಆರಾಧನೆಯನ್ನು ಬಿಟ್ಟರೆ ಇಷ್ಟು ವೈಭವದಲ್ಲಿ ನಡೆದ ಆರಾಧನೆ ಮತ್ತೊಂದಿಲ್ಲ ಎಂದು ಭಕ್ತಾದಿಗಳು ಸ್ಮರಿಸಿದ್ದುಂಟು. ಶ್ರೀಗಳ ದಾಸೋಹ ಮಹಿಮೆಗೆ ಈ ಮೊದಲ ಆರಾಧನೆ ನಾಂದಿಯಾಯಿತು. ಅವರು ಅಧಿಕಾರ ಸ್ವೀಕರಿಸಿ ಸುಮಾರು ಮೂರು

ವರುಷಗಳ ಹತ್ತಿರ ಬರುತ್ತಿದೆ; ಈ ಅಲ್ಪ ಅವಧಿಯಲ್ಲಿ ಅವರು ನಡೆಸಿದ ಆರಾಧನಾ ಮಹೋತ್ಸವಗಳು, ಹಬ್ಬ, ಜಂಗಮೋತ್ಸವಗಳಿಗೆ ಲೆಕ್ಕವಿಲ್ಲ. "ನೀಡುವ ಮನೆಗೆ ನೆಂಟರು ಹೆಚ್ಚು" ಎಂಬುವಂತೆ ನಮ್ಮ ಮಠಕ್ಕೆ ಭಕ್ತರ ಸಂಖ್ಯೆ ಹೆಚ್ಚು. ಬಂದು ಹೋಗುವವರು ಅಪಾರ, ದಿನನಿತ್ಯದ ದಾಸೋಹ ತ್ರಿಕಾಲದಲ್ಲಿಯೂ ಎಂದಿಗಿಂತ ಹೆಚ್ಚಾಗಿ ನಡೆಯಲು ಆರಂಭವಾಯಿತಲ್ಲದೆ ವರ್ಷದಲ್ಲಿ ಎರಡು ವೇಳೆ ನಡೆಯುವ ಜೇಷ್ಠಮಾಸದ ಆರಾಧನೆ, ಕಾರ್ತೀಕ ಮಾಸದ ಆರಾಧನೆ, ಧನುರ್ಮಾಸ, ಶಿವರಾತ್ರಿ ಪೂಜೋತ್ಸವಗಳು ಇವುಗಳ ಜೊತೆಗೆ ಶ್ರೀ ದ್ವಂದಪ್ಪಸ್ವಾಮಿಗಳವರ ಮತ್ತು ಕಿತ್ತೂರುಹುಂಡಿ ಶ್ರೀಗಳವರ ಕೈಲಾಸ ಗಣಾರಾಧನೆಗಳು ಈ ಹಲವು ಮಹೋತ್ಸವಗಳನ್ನು ಯಾವ ತೊಂದರೆಯೂ ಇಲ್ಲದೆ ಭಕ್ತರು ಭಕ್ತಿಯಿಂದ ನೀಡಿದ ಭಿಕ್ಷ ಮಾತ್ರದಿಂದಲೇ ನಡೆಸಿ ದಾಸೋಹ ಕಾಯಕವನ್ನು ಶ್ರೀಗಳು ಅಕ್ಷಯ ಗೊಳಿಸಿದರು.

ಅವರು ಅಧಿಕಾರ ವಹಿಸಿಕೊಂಡ ಕೆಲವೇ ತಿಂಗಳಲ್ಲಿ ನಡೆಸಿದ ಅದ್ಭುತ ಪವಾಡ ಸದೃಶವಾದ ಕೆಲಸ ಎಂದರೆ ಅಸಮಗ್ರವಾಗಿದ್ದ ಮಠದ ಕೆಲಸಕ್ಕೆ ಬಸವಣ್ಣಸ್ವಾಮಿಗಳು ಮೊದಲೇ ಯೋಜನೆ ಹಾಕಿದ್ದರಷ್ಟೆ? ಅದನ್ನು ಶ್ರೀಗಳು ಮುಂದುವರಿಸಲು ಮಲೆಯೂರು ಬೆಟ್ಟದಿಂದ ದಿಂಡು ಚಪ್ಪಡಿಗಳನ್ನು ತರಿಸಿದರು. ಒಂದೇ ದಿನದಲ್ಲಿ ಮಲೆಯೂರು ಮತ್ತು ಸುತ್ತಮುತ್ತಣ ಗ್ರಾಮಗಳ ಭಕ್ತರು ಅಸಂಖ್ಯಾತ ಗಾಡಿಗಳಲ್ಲಿ ಕಲ್ಲು ದಿಂಡುಗಳನ್ನು ಏರಿಕೊಂಡು ವಾದ್ಯ, ತಮ್ಮಟೆ, ಕಹಳೆಯ ಘೋಷದೊಡನೆ ಬಂದರು. ದೇವನೂರಿನ ಜನತೆಗೆ ಇದು ಪರಮಾದ್ಭುತ ದೃಶ್ಯವಾಗಿ ಕಂಡಿತು. ಅಷ್ಟು ಬಂಡಿಗಳು ಒಂದೇ ರಸ್ತೆಯಲ್ಲಿ ಬರಲು ಸಾಧ್ಯವಾಗದೆ ಕವಲಂದೆ ಮತ್ತು ಬದನವಾಳು ಮಾರ್ಗಗಳಲ್ಲಿ ಬಂದು, ಕಲ್ಲುಗಳನ್ನು ಮಠಕ್ಕೆ ಸುಮಾರು ನಾಲ್ಕೈದು ಫರ್ಲಾಂಗ್ ದೂರದಲ್ಲಿಯೇ ರಸ್ತೆಯ ಎರಡೂ ಕಡೆಯೂ ರಾಶಿ ಮಾಡಿದರು. ಶ್ರೀ ಶಿವಪ್ಪಸ್ವಾಮಿಗಳ ಕಾಲದಲ್ಲಿ ಇಂತಹ ಮಹತ್ತರ ಕೆಲಸ ನಡೆದಿತ್ತಂತೆ! ಈ ಕಲ್ಲುಗಳನ್ನು ಗೇಯಿಸಿ ಶ್ರೀ ಶಿವಪ್ಪಸ್ವಾಮಿಗಳ ನಂತರ ನಿಂತುಹೋಗಿದ್ದ, ಅರೆಮುರಿದು ಪಾಳಾ



ಶ್ರೀ ಶಿವಪ್ಪನವರಿಂದ ಕಟ್ಟಿಸಲ್ಪಟ್ಟ ಆರ್ಚ್



ಶ್ರೀ ಶಿವಪ್ಪನವರ ಕಟ್ಟಿಸಿದ ದನಗಳ ಕೊಟ್ಟಿಗೆ

ಗಿದ್ದ ಮಠದ ಪಶ್ಚಿಮ ಭಾಗದ ಕಟ್ಟಡದ ನಿರ್ಮಾಣದ ಕೆಲಸ ಆರಂಭ ವಾಗಿ ಕೆಲವೇ ತಿಂಗಳುಗಳಲ್ಲಿ ಸುಂದರವಾದ ಕಟ್ಟಡ ವೈವೆತ್ತಿನಿಂತಿತು. ಯಾರು ಈ ಮಹತ್ತರ ಕೆಲಸವನ್ನು ಮಾಡಿಯಾರೋ ಎಂದು ಜನರು ಬಹಳದಿನಗಳಿಂದ ನಿರೀಕ್ಷಿಸಿತ್ತು! ಬಹುಶಃ ಈ ಕೆಲಸ ಪೂತ್ತಾರಿಂದಲೂ ಸಾಧ್ಯವಾಗದು ಎಂಬ ಅನುಮಾನವೂ ಇತ್ತು! ಇಂಥ ಕೆಲಸ ಕಣ್ಣು ಮುಚ್ಚಿ ಬಿಡುವುದರಲ್ಲಿ ಶ್ರೀಗಳವರು ತಮ್ಮ ಹಸ್ತಸ್ಪರ್ಶದಿಂದ ನೆರವೇರಿಸಿ ದರು, ಸುಣ್ಣ-ಗಾರೆ-ಬಣ್ಣಗಳನ್ನು ಕಾಣದೆ ಹಲವು ಜಂಜಾಟಗಳ ಮಧ್ಯೆಸಿಕ್ಕಿ ಕಪ್ಪಾಗಿ, ಮಸಕಾಗಿದ್ದ ಮಠದ ಆ ಗೋಡೆಗಳು, ಕೊಠಡಿ ಗಳು ಹೊಸರೂಪು ತಾಳಿದವು. ಶ್ರೀಮಠಕ್ಕೆ ಸುಣ್ಣ ಬಣ್ಣ ಹಾಕಿಸು ವುದು ಸಾಮಾನ್ಯವಾಗಿ ಶ್ರೀಮಂತರಿಂದಲೂ ಆಗದ ಕೆಲಸ: ಅದು ಶ್ರೀಗಳಿಂದ ನಿರಾಯಾಸವಾಗಿ ನಡೆಯಿತು. ಅದು ಯಾವ ಶುಭಘಳಿಗೆಯಲ್ಲಿ ಶ್ರೀ ಮಠದ ಜೀರ್ಣೋದ್ಧಾರದ ಕೆಲಸಕ್ಕೆ ಕೈಹಚ್ಚಿದರೋ, ಅಂದಿನಿಂದ ಇಂದಿನವರೆಗೂ ಆ ಕೆಲಸ ನಡೆಯುತ್ತಲೇ ಇದೆ! ಎಷ್ಟು ಕೆಲಸ ಮಾಡಿ ದರೂ ಸಹ ಇಂದಿಗೆ ಶ್ರೀ ಮಠದಲ್ಲಿ ಮಾಡಬೇಕಾದ ಕೆಲಸ ಮುಗಿಯಿತು ಎಂದು ಮಾತ್ರ ಹೇಳುವ ಆಗಿಲ್ಲ, ಇದು ಶ್ರೀ ಗುರುಮಲ್ಲೇಶ ಮಹಾತ್ಮೆ.

ಶ್ರೀಗಳ ಭಿಕ್ಷದಕಾರ್ಯ ಮತ್ತು ಪಾದಪೂಜೋತ್ಸವಗಳು ಇಂದು ಇಲ್ಲ ಎಂದು ಹೇಳುವ ಆಗಿಲ್ಲ. ಈ ಊರಿನಲ್ಲಿ ಇಂದು ಭಿಕ್ಷವಾದರೆ ರಾತ್ರಿಗೆ ಮತ್ತಾವುದೋ ಊರಿನಲ್ಲಿ ಪಾದಪೂಜೆ ಮತ್ತೆ ನಾಳೆ ಮಗ ದೊಂದು ಊರಿನ ಸಮ್ಮೇಳನದ ಅಧ್ಯಕ್ಷತೆ ಹೀಗೆ ಎಡಬಿಡದ ಕಾರ್ಯ ಕ್ರಮಗಳು. ಸರ್ವಾಂತರ್ಯಾಮಿಯಾದ ಶಿವನ ಅಂಶದವರಾದ ಈ ಗುರುಪರಂಪರೆಯವರು ಈ ಕೆಲಸಗಳನ್ನು ಕುಳಿತಲ್ಲಿಂದಲೇ ನಡೆಸುವರು.

ಶ್ರೀ ಬಸವಣ್ಣಸ್ವಾಮಿಗಳ ಕಾಲದಲ್ಲಿ ದವಸ ಧಾನ್ಯಗಳಿಗೂ ಸ್ವಲ್ಪ ಕೊಂದರೆ ಇದ್ದು ಅವರು ಅದೆಷ್ಟು ಶ್ರಮವಹಿಸಿ ದಾಸೋಹ ಕಾಯಕ

ಹನ್ನು ನಿರ್ವಹಿಸಿದರೋ ದೇವರೇ ಬಲ್ಲ! ಆದರೆ ಇತ್ತೀಚೆಗೆ ಇವರ ಕಾಲದಲ್ಲಿ ಉಗ್ರಾಣದಲ್ಲಿರುವ ಕಣಜದ ಜೋಳ ಖಾಲಿಯಾಗಿಲ್ಲ. ಮುಂದಿನ ವರ್ಷಕ್ಕೂ ಇದೇ ಸಾಕಾಗುತ್ತದೆ ಎನ್ನುವಷ್ಟು ದವಸ ಸದಾ ಇರುವದು ಪವಾಡವಲ್ಲದೇ ಮತ್ತೇನು? ಇಷ್ಟು ಆರಾಧನೆ, ಉತ್ಸವ ಗಳಾದರೂ ದವಸಧಾನ್ಯಕ್ಕೆ ಕುಗ್ರಾಮುವೇ ಬಂದಿಲ್ಲ.

ಅದಲ್ಲದೆ ಮಹಾಸ್ವಾಮಿಗಳು ಯುಗಧರ್ಮಕ್ಕೆ ತಕ್ಕಂತೆ ತಮ್ಮ ತತ್ವವನ್ನು ಅಳವಡಿಸಿಕೊಂಡವರು. ಆಧುನಿಕ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಬೇಕು, ಶಾಲಾಕಾಲೇಜುಗಳನ್ನು ಆರಂಭಿಸಬೇಕು, ಕ್ರಮಬದ್ಧತೆಯಲ್ಲಿ ಸುವ್ಯವಸ್ಥಿತವಾಗಿ ಕೆಲಸ ಕಾರ್ಯಗಳನ್ನು ನಡೆಸ ಬೇಕು ಎಂಬ ಭಾವನೆ ಉಳ್ಳವರು. ಇವರು ಇಟ್ಟ ದಿಟ್ಟ ಹೆಜ್ಜೆ ಎಂದರೆ ಮೈಸೂರು ನಗರದಲ್ಲಿ ಕಾಲೇಜಿನಲ್ಲಿ ಓದುವ ವಿದ್ಯಾರ್ಥಿಗಳಿಗೆ ಅನುಕೂಲ ವಾಗಲಿ ಎಂದು ಶ್ರೀ ಗುರುಮಲ್ಲೇಶ್ವರ ಉಚಿತ ವಿದ್ಯಾರ್ಥಿ ನಿಲಯವನ್ನು ತೆರೆದಿದ್ದು. ಅನೇಕ ಬಡ ವಿದ್ಯಾರ್ಥಿಗಳು ಅದೆಷ್ಟು ತೊಳಲಾಡುತ್ತಿ ದ್ದರೋ ಅದನ್ನು ಕಂಡು ಮರುಕಗೊಂಡು ಬಡವರಿಗಾಗಿ, ಹಳ್ಳಿಗಾಡಿನಿಂದ ಹೋಗಿ ಪಟ್ಟಣದ ದುಬಾರಿ ವೆಚ್ಚವನ್ನು ತಾಳಲಾರದೆ ನೋಯುವ ಮಕ್ಕಳಿಗಾಗಿ ಈ ಮಹತ್ತರ ಕೆಲಸ ಮಾಡಿ ಭಕ್ತಾದಿಗಳ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಅವರು ತಮ್ಮ ಈ ಸೇವೆಯನ್ನು ಇಷ್ಟಕ್ಕೇ ನಿಲ್ಲಿಸಿಲ್ಲ. ಮೈಸೂರಿನಲ್ಲಿ ಅದಕ್ಕೆ ಪ್ರತ್ಯೇಕವಾದ ಒಂದು ಕಟ್ಟಡ ನಿರ್ಮಾಣ ಮಾಡುವ ಮಹದಾಶೆಯಲ್ಲಿದ್ದಾರೆ.

ದೇವನೂರಿನಲ್ಲಿರುವ ಹಾಸ್ಟಲಿನ ಕಟ್ಟಡದ ವಿಸ್ತರಣೆಯ ಕೆಲಸವೂ ಕೂಡ ಈವಾಗಲೇ ಆರಂಭವಾಗಿದ್ದು ಮಾತೃ ಪ್ರಾಯವಾದ ಈ ವಿದ್ಯಾರ್ಥಿ ನಿಲಯವನ್ನು ಹೆಚ್ಚು ಉನ್ನತಮಟ್ಟದಲ್ಲಿ ತರಲು ಸಂಕಲ್ಪ ಮಾಡಿದ್ದಾರೆ. ಆ ಕೆಲಸ ಈಗ ನಡೆಯುತ್ತಾ ಇದೆ.



ಶ್ರೀ ತೋಂಟದಾರ್ಯ ಮಹಾಸ್ವಾಮಿಗಳ ಗದ್ದಿಗೆಯ

‘ಗೋಪುರ’

ಅವರು ಇತ್ತೀಚಿಗೆ ಮಹಾನ್ ಯೋಜನೆ ಹಾಕಿಕೊಂಡಿರುವುದು ಎಂದರೆ ದೇವನೂರಿನಲ್ಲಿ ಗ್ರಾಮಾಂತರದವರಿಗೆ ಹೆಚ್ಚು ಅನುಕೂಲವಾಗುವಂತೆ ಜೂನಿಯರ್ ಕಾಲೇಜನ್ನು ಸ್ಥಾಪಿಸಬೇಕೆಂದು ದೃಢನಿರ್ಧಾರ ಮಾಡಿರುವ ಸಂಗತಿಯಿಂದ ಅವರಿಗೆ ಅನ್ನದಾನದ ಜೊತೆಗೆ ವಿದ್ಯಾದಾನದ ಬಗೆಗೆ ಇರುವ ಅಪಾರ ಪ್ರೇಮ ವ್ಯಕ್ತವಾಗುತ್ತದೆ.

ಶ್ರೀ ಗುರುಗಳು ತಾವು ಪೀಠಾರೋಹಣ ಮಾಡಿ ನೆಟ್ಟಗೆ ಮೂರು ವರ್ಷವೂ ತುಂಬಿಲ್ಲ! ಈ ಅಪಾರವಾದ ಕೆಲಸಗಳ ಹೊರೆಯನ್ನು ಹೊತ್ತು ನಡೆಸುತ್ತಿರುವ ಅವರು ಈಗ ನಡೆಸಲು ನಿರ್ಧರಿಸಿರುವ, " ಶ್ರೀಮನ್ನಿರಂಜನ ಗುರುಮಲ್ಲೇಶ್ವರ ಮಹಾಸ್ವಾಮಿಯವರ ವಜ್ರಮಹೋತ್ಸವ ಮತ್ತು ಶ್ರೀ ಗುರುಭಿಕ್ಷದಾರ್ಯ ಮಹಾಸ್ವಾಮಿಯವರ ಹಾಗೂ ಶ್ರೀ ಗುರುತೋಂಟದಾರ್ಯ ಮಹಾಸ್ವಾಮಿಯವರ ಶ್ರೀ ಗದ್ದಿಗೆಗಳ ಸುವರ್ಣ ಕಲಶಾರೋಹಣ " ದ ಮಹೋನ್ನತವೂ, ಮಹತ್ತರವೂ ಆದ ಸೇವೆ. ಇದಕ್ಕೆ ಅವರು ಬದ್ಧಕಂಕಣರಾಗಿ 1973 ಮಾರ್ಚಿ 19 ರಂದು ನೆರವೇರಿಸಲು ಸುವ್ಯವಸ್ಥಿತವಾದ ಯೋಜನೆಗಳನ್ನು ಭಕ್ತರೆಲ್ಲರ ಅಭಿಮತಕ್ಕೆ ಅನುಗುಣವಾಗಿ ಹಾಕಿಕೊಂಡು ಕಾರ್ಯಾಸಕ್ತರಾಗಿರುವುದು ಊಹೆಗೆ ನಿಲುಕದಷ್ಟು ಮಹಾದಾಶ್ಚರ್ಯ! ಶ್ರೀಗಳು ನಗುನಗುತ್ತಲೆ " ಅಯ್ಯೋ ಗುರುಮಲ್ಲೇಶ ಅವ್ನೆ, ಮಾಡ್ತಾನೆ" ಎನ್ನುವರು. ಅಭಿನವ ಶ್ರೀ ಗುರುಮಲ್ಲೇಶ್ವರರಾಗಿ ನಮಗೆ ಸಂದರ್ಶನವೀಯುತ್ತಿರುವ ಶ್ರೀಗಳ ದೃಷ್ಟಿಯಲ್ಲಿ ಇದು ಎಲ್ಲಾ ಸೇವೆಗಳಂತೆ ಒಂದು ಸೇವೆ ಮಾತ್ರವಾಗಿದೆ. ಸಾಮಾನ್ಯರಾದ ನಮಗೆ ಅದು ಬ್ರಹ್ಮ, ಶ್ರೀಗುರುವಿಗೆ ಅದು ತೃಣ!

ಶ್ರೀ ಶ್ರೀ ಮಹಾಂತಸ್ವಾಮಿಗಳವರ ನೇತೃತ್ವದಲ್ಲಿ ಶ್ರೀ ಮಠದ ಸೇವೆ ಅತಿ ರಭಸದಿಂದ ಪ್ರಗತಿ ಪಥದಲ್ಲಿ ನಡೆಯುತ್ತಿರುವುದು ಶ್ರೀ ಮಠದ ಸುವರ್ಣಯುಗದ ಪ್ರಥಮ ಅಧ್ಯಾಯ. ಈಗಾಗಲೇ ನನಸು ಗೊಳ್ಳುತ್ತಿರುವ ಬಸವಣ್ಣಮಹಾಸ್ವಾಮಿಗಳವರ ಯೋಜನೆ ಆದಿಯಾಗಿ

ಶ್ರೀ ಗುರುಪರಂಪರೆಗಳವರೆಲ್ಲರ ಹಲವಾರು ಆಶೆ ಆಕಾಂಕ್ಷೆಗಳನ್ನು ಈಡೇರಿಸಿ ದೇವನೂರು ದಕ್ಷಿಣ ಕಾಶಿ; ಎರಡನೇ ಕಲ್ಯಾಣ, ವೀರಶೈವ ಧರ್ಮೋದ್ಧಾರದ ಎರಡನೇ ಅನುಭವ ಮಂಟಪ ಎಂಬ ಹೆಸರನ್ನು ಚಿರಸ್ಥಾಯಿಯಾಗಿ ಉಳಿಸುವುದರಲ್ಲಿ ಯಾವ ಸಂಶಯವೂ ಇಲ್ಲ.

ಈ ಪವಿತ್ರಮಯನ ಶ್ರೀಪಾದಪದ್ಮಗಳಲ್ಲಿ ಶಿರಸಾಷ್ಟಾಂಗ ಪ್ರಣಾಮಂಗೈದು ವಿರಮಿಸೋಣ..



ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

1973 ಮಾರ್ಚಿ 19 ರಂದು ನಡೆದ ಶ್ರೀ ಗುರುಮಲ್ಲೇಶ್ವರ

ವಜ್ರಮಹೋತ್ಸವ ಮತ್ತು ಶ್ರೀ ಭಿಕ್ಷದಾರ್ಯ

ಸ್ವಾಮಿಗಳವರ ಹಾಗು ಶ್ರೀ ತೋಂಟದಾರ್ಯ

ಸ್ವಾಮಿಗಳವರ ಗದ್ದಿಗೆಗಳ ಸುವರ್ಣ

ಕಲಶಸ್ಥಾಪನಾ ಮಹೋತ್ಸವ

ಸಂದರ್ಭದಲ್ಲಿ ಹೊರಬಂದ

ಗ್ರಂಥ